ಮೊದಲ ನುಡಿ

ಅ (ಕಾರದಿಂದ) ಕ್ಷ (ಕಾರದವರೆಗೆ) ರಗಳಲ್ಲಿನ ಆಕೀರ್ಣದ (ವಿಸ್ತಾರತೆಯ) ಇತಿಮಿತಿಯನ್ನರಿಯಲು ಈಸುತ್ತಿರುವಾಗ ಉಗಮವಾದ ಊರ್ಮಿಯನ್ನು (ಅಲೆಯನ್ನು) ಋತುಗಳ ಎಸಳುಗಳಂತೆ, ಏಕಾಗ್ರತೆಯ ಐಚ್ಛಿಕದೊಂದಿಗೆ ಒಟ್ಟಾರೆ ಓದುಗರಿಗೆ ಔಚಿತ್ಯದಿಂದ (ಗೌರವದಿಂದ) ಅಂತರ್ಗತದಲ್ಲಿದುದ್ದನ್ನು ಕೊಡುಗೆಯಾಗಿಸಲು, ಖನಿಗಾರಿಕೆಯನ್ನು (ಗಣಿಗಾರಿಕೆಯನ್ನು) ಗೈರತ್ತಿನಿಂದ (ಧೈರ್ಯದಿಂದ) ಘಟಿಸಲು (ನಡೆಸಲು) ಚಟುವಟಿಕೆಗಳನ್ನು, ಛಲದಿಂದ ಜಾರುತ್ತಿರುವ ಝರಿಯಂತೆ, ಟೊಂಕಕಟ್ಟಿ ಠೀವಿಯಲಿ, ಡೌಲುರಹಿತ (ಆಡಂಬರವಿಲ್ಲದೆ) ಢಾಲಿನೊಡನೆ (ಜೋಪಾನವಾಗಿ) ತತ್ಸಂಗತಿಯಿಂದ ಥಳುಕಿಲ್ಲದೇ ದಿಟ್ಟತನದ ಧ್ಯೇಯೋಕ್ತಿಯೊಂದಿಗೆ ನಡೆದು, ಪಡೆದ ಫಲಿತಾಂಶವನ್ನು ಬಹು ಭಾವಪರವಶತೆಯಿಂದ ಮಾನ್ಯರಿಗೆ ಯಥಾವತ್ತಾಗಿ ರವಾನಿಸಲೋಸುಗ ಲಕ್ಷ್ಯವಿಟ್ಟು ವರದಿಮಾಡಲು ಶ್ರಮಿಸಿ, ಷರತ್ತಿಲ್ಲದೆ ಸಹೃದಯದವರೊಂದಿಗೆ ಹಂಚಿಕೊಳ್ಳಬೇಕೆಂಬ ಕ್ಷುಧೆ (ಹಸಿವು) ...

-ಮೋಹನ

# ಪರಿವಿಡಿ

ಅಪ್ಪ
ಅಮ್ಮ
ಆರಕ್ಷಕ
ಕುಟುಂಬ
ಕುರುಕ್ಷೇತ್ರ
ಕೊರಗು
ಜಾಗತೀಕರಣ
ಜಾಹೀರಾತು
ಜೀವನಮೌಲ್ಯಗಳು
ಜೀವನದ ಸಾರ್ಥಕ್ಯತೆ
ದಶಾವತಾರ
ದೂರದರ್ಶನ
ದೃಶ್ಯಮುದ್ರಣದಾಟ (ವೀಡಿಯೋ ಗೇಮ್)
ನೆಮ್ಮದಿ
ಪ್ರಕೃತಿ
ಪ್ರಾರ್ಥನೆ
ಪಾಂಡವರು
ಪುಸ್ತಕ
ಪೂಜೆ
ಬನ್ನಂಜೆ ಗೋವಿಂದಾಚಾರ್ಯ
ಬಾತ್ಮೀದಾರ
ಬುದ್ಧ
ಭಗವದ್ಗೀತೆ
ಮಡಿವಂತ
ಮನಸ್ಸು
ಮರ್ಯಾದಾಪುರುಷ
ಮುದಿತನ
ರಾಷ್ಟ್ರಪಿತ
ರುದ್ರಭೂಮಿ
ವಸಂತ ಕಾಲ
ವಿದ್ಯಾಲಯ
ವಿದೂಷಕ
ಶ್ರೀಕೃಷ್ಣ
ಶ್ರೀಮಂತ
ಶೂದ್ರ
ಶೃಂಗಾರ
ಸಂಗೀತ
ಸಂತಾನ
ಸಮಾಜ
ಸುನಾಮಿ
ಹಕ್ಕೋಲೆ (ಪೇಟೆಂಟ್)
ಹದಿನೆಂಟರ ಮಹತ್ವ
ಹಸಿವು
ಹಿತೈಶಿ
ಹೊಟ್ಟೆಕಿಚ್ಚು

೧. ಪ್ರಕೃತಿ ಮಾತೆ
೨. ವಾಸ್ತವ
೩. ಜೀವನ
೪. ಸತ್ಯ
೫. ವಿದ್ಯೆ
೬. ಯಶಸ್ಸು
೭. ಋಣ
೮. ಯಜಮಾನ
೯. ಏಳಿಗೆ
೧೦. ಫಲಿತಾಂಶ
೧೧. ಗೆಳೆತನ
೧೨. ನಿರರ್ಗಳತೆ
೧೩. ಔತಣ
೧೪. ದಾರಿ
೧೫. ವಿಪರ್ಯಾಸ
೧೬. ತೃಪ್ತಿ
೧೭. ನಿಶ್ಚಿತ
೧೮. ಘನತೆ
೧೯. ರಸಿಕತೆ
೨೦. ಛಲವಾದಿ
೨೧. ಬದಲಾವಣೆ
೨೨. ಮೋಸಗಾರ
೨೩. ತೀರ್ಮಾನ
೨೪. ಪರಿಹಾರ
೨೫. ಬದುಕು
೨೬. ದಾಂಪತ್ಯ
೨೭. ಧರ್ಮದರ್ಶಿ
೨೮. ಪ್ರತಿಫಲ
೨೯. ವಿಪರ್ಯಾಸ
೩೦. ಅನುಭವಿ
೩೧. ಕಷ್ಟ-ಸುಖ
೩೨. ಭ್ರಮೆ
೩೩. ಮುಕ್ತಿ
೩೪. ಅವರವ ಭಾವಕ್ಕೆ
೩೫. ನಿರಾಸೆ
೩೬. ಬದಲಾವಣೆ
೩೭. ಫಲಿತಾಂಶ
೩೮. ಹಾರೈಕೆ
೩೯. ಅಭಯ
೪೦. ಕಾರಣ
೪೧. ಪ್ರಶ್ನೆ



**ಅಪ್ಪ**

ಅಂಬಿಗನಂತೆ ಆಕಾಂಕ್ಷಿಗನಾಗಿ, ಇಕ್ಕಟ್ಟಿಗೆ ಈಡಾದರೂ ಉಪಾಯದಿಂದ ಊರ್ಜಿತವಾಗಲು ಋಜುತನದೇ (ಪ್ರಾಮಾಣಿಕತನದೇ), ಎಡಬಿಡದ ಏರುಪೇರುಗಳಾದ ಐಹಿಕ ಒಡ್ಡುಗಳೆಲ್ಲವನ್ನು ಓಗರತನದ (ಪ್ರೌಢತನದ) ಔನ್ನತ್ಯದಿಂದ (ಅತ್ಯುತ್ತಮ ಮಟ್ಟದಿಂದ) ಅಂಕೆಯಲ್ಲಿಡಲು, ಕ್ರಮಬದ್ಧತೆಯಿಂದ ಖಂಡಿತವಾಗಿ ಗೆಲ್ಲಲು ಘನ ಚತುರ ಛಲದೊಂದಿಗೆ, ಜೀವನವನ್ನು ಝುರಿಯಾಗಿಸಲು ಟೊಂಕಕಟ್ಟಿ ಠೀವಿಯಿಂದ ಡೋಗರಗಳನ್ನು (ಹಳ್ಳಕೊಳ್ಳಗಳನ್ನು) ಢಾಲಿಸಲು (ಮರೆಮಾಡಲು) ತತ್ತರಿಸದೆ ಥಟ್ಟನೆ ದಕ್ಷತೆಯಿಂದ ಧೃತಿಗೆಡದೆ ನುಗ್ಗುವ ಪಣತೊಟ್ಟ ಫಲವಾಗಿ, ಬೆವರಿಳಿಸಿದ ಭಂಟನ ಮಡಿಲಿಗೆ ಯಥಾವತ್ತಾಗಿ ರವಾನೆಯಾದ ಲಬ್ಧತೆಯಂತೆ, ವರದಾನವನ್ನು ಶ್ರುತಪಡಿಸುವ (ಸಾರುವ) ಷರಾದಂತೆ (ಅಭಿಪ್ರಾಯದಂತೆ) ಸಂಸಾರದವರೊಂದಿಗೆಲ್ಲಾ ಹಂಚಿಕೊಳ್ಳುವ ಕ್ಷಮತಾವಂತ.



**ಅಮ್ಮ**

ಅಮ್ಮನೆಂಬುವ ಆಕರ (ಮೂಲ) ಇಂದ್ರೀಯಾತೀತವೆಂದು ಈಕ್ಷಿಸು (ಅರ್ಥ ಮಾಡಿಕೊ) ಉಕ್ಕುವ, ಊಹಿಸಲಾಗದ ಋಜುತ್ವತೆಯನ್ನು (ನಿಷ್ಕಪಟತೆಯನ್ನು) ಎದೆಗೂಡಿನಲ್ಲಿಟ್ಟುಕೊಂಡು ಏಕಾಗ್ರತೆಯಿಂದ ಐಹಿಕತೆಯ (ಭೌತಿಕ) ಒಡಂಬಡಿಕೆಗೆ ಓಗೊಡದೆ ಔರಸವನ್ನು (ಧರ್ಮಸಮ್ಮತೀಯ) ಅಂತಃಕರಣದೇ, ಕಡಲಿನ ಖಜಾನೆಯಂತೆ ಗಂಟುಕಟ್ಟಿಕೊಂಡು ಘನತೆವೆತ್ತ ಚಂದ್ರಿಕೆಯಂತೆ (ಶಾಂತಮೂರ್ತಿಯಾಗಿ) ಛಲದಿಂದ, ಜಂಬರರಹಿತ (ವ್ಯಾಪಾರೀಕರಣವಲ್ಲದ) ಝಳಪಿನೊಡನೆ ಟೀಕೆಗೆ, ಠೇಂಕಾರಕ್ಕೆ ಡೋಲಾಯಮಾನವಾಗದೇ, ಢಿಕ್ಕಿಸಿ ತತ್ತರಿಸಿದರೂ ಥಟ್ಟನೆ ದಣಿವಿಲ್ಲದೇ, ಧರ್ಮಾರ್ಥವಾಗಿ ನಡೆವ ಪಟ್ಟುಬಿಡದೆ ಫಲಪ್ರದವನ್ನು ಬಯಸಿ ಭಕ್ತಿಯಿಂದ ಮಜಲುಗಳನ್ನೇರಿ ಯಾವಾಗಲೂ ರಕ್ಷಿಸುವೆನೆಂಬ ಲಹರಿಯೊಂದಿಗೆ (ಮನೋಧರ್ಮದಲ್ಲಿ) ವಂಶವೃಕ್ಷವನ್ನುಳಿಸಲು ಶಪಥಗೈದು, ಷರತ್ತಿನಲಿ ಸಲುಹುವ ಹಚ್ಚನೆಯ ಕ್ಷಮಯಾಧರಿತ್ರಿ.



**ಆರಕ್ಷಕ**

ಅಸ್ಥಿರತೆ ಆಸ್ಫೋಟಗೊಳ್ಳದಂತೆ, ಇಣುಕಾಡುವ ಈಡಾಡುತನವನ್ನು (ಅಸ್ತವ್ಯಸ್ತತೆ) ಉದಾಸೀನಮಾಡದೆ ಊರ್ಜಿತನಾಗಿ (ಶಕ್ತನಾಗಿ) ಋಜುಮಾರ್ಗದಲ್ಲೇ (ನೇರವಾಗಿ) ಎದುರಿಸಿ, ಏತನ್ಮಧ್ಯೆ ಐಕ್ಯಮತ್ಯವು ಒಪ್ಪ ಓರಣವಾಗಿರುವಂತೆ ಔತ್ಸುಕ್ಯತನದಿ (ಕಾತರದಿಂದ) ಅಂಕೆಯಲ್ಲಿಡಲು ಕಟ್ಟಳೆಯನ್ವಯ, ಖಂಡಿತವಾದಿಯಾಗಿ ಗಟ್ಟಿಗತನವನ್ನು ಘಳಿಗೆಯರಿವಿಲ್ಲದೆ ಚಾಕಚಕ್ಯತೆಯಲ್ಲಿ ಛಲವಾದಿಯಂತೆ ಜನರಲ್ಲೇಳುವ ಝುಂಝುತ್ವಕ್ಕೆ (ಹಿಂಸಾತ್ಮಕತೆಗೆ) ಟೋಕಾಗಿ (ಸಾರಾಸಗಟಾಗಿ) ಠೀವಿಯಿಂದ ಡೋಲಾಯಮಾನವಿಲ್ಲದೆ ಢಕ್ಕಾಮುಕ್ಕಿಸಿದ (ಬಲವಂತವಾಗಿ ಕೈಕೋಳ ತೊಡಿಸಿದ) ತತ್ಪರಿಣಾಮವಾಗಿ ಥಳಿಸಲೋ, ಧಮನಗೊಳಿಸಲೋ ಧೈರ್ಯಗೆಡದ ನಡವಳಿಕೆಯನ್ನು ಪಾಲಿಸಿ ಫಲಿತಾಂಶಕ್ಕೆ ಬೆವರುಸುರಿಸಿ ಭಾವೋದ್ರೇಕವಿಲ್ಲದ ಮುಂದಾಳತ್ವದಿಂದ ಯಥಾರ್ತವಾಗಿ (ಪ್ರಾಮಾಣಿಕ) ರಕ್ಷಿಸಲೋಸುಗ ಲಕ್ಷ್ಯ ವಹಿಸಿ ಶಂಕಿತರ ಷಡ್ಯಂತ್ರವನ್ನು ಸಮರ್ಪಕವಾಗಿ ಹರಣಗೊಳಿಸುವ ಕ್ಷತ್ರ.



**ಕುಟುಂಬ**

ಅಂತಸ್ತಿಗೆ ಆಕರ್ಷಿತರಾಗದೆ ಇದ್ದುದ್ದರಲ್ಲಿಯೆ ಈರ್ಷ್ಯೆಪಡದೆ ಉಳಿದವರೊಂದಿಗೆ ಊರ್ಜಿತರಾಗಲು ಋತುಗಳುರುಳಿದಂತೆ ಎಲ್ಲರ ಏಳಿಗೆಗೆ ಐಕ್ಯಮತ್ಯದಿಂದ ಒಡನಾಡುತ್ತಾ, ಓರೆಯಿಲ್ಲದ ಔದಾರ್ಯದೊಡನೆ ಅಂತರವೆಂಬ ಕಂದರವನ್ನು ಖಚಿತವಾಗಿ ಗಟ್ಟಿನಿಂದ ಘನೀಕರಿಸುವ ಚರ್ಯೆಯನ್ನು ಛಲದಿಂದ ಜರುಗಿಸಿ ಝುಗಝುಗಿಸಲು ಟೊಂಕಕಟ್ಟಿ ಠೀಕಾಗಿ ಡೌಲಿನಿಂದ (ಹುಮ್ಮಸ್ಸಿನಿಂದ) ಢಾಳಿಸಿದ (ರೂಪಿಸಿದ) ತತ್ಪರಿಣಾಮವಾಗಿ ಥಳಥಳಿಸುತ್ತಾ ದೊರೆಯುವ ಧನಾತ್ಮಕ ನಡವಳಿಕೆಗಳನ್ನು ಪ್ರಾಶಸ್ತ್ಯದೊಡನೆ (ಮಹತ್ವದೊಡನೆ) ಫಲವತ್ತಾಗಿಸುತ್ತಾ ಬಂಡವಾಳವಾಗಿಸಿಕೊಂಡು ಭ್ರಾತೃತ್ವದ (ಒಡಬಳಗ) ಮಡಿಲಲ್ಲಿ ಯಥಾರ್ಥವಾಗಿ ರೂಪಿಸಲು ಲವಲವಿಕೆಯಿಂದ ವಿಸ್ತರಿಸುತ್ತಾ ಶಾಂತಿಪ್ರಿಯರಾಗಲು ಷಕ್ಕಿಲ್ಲದೇ (ಅನುಮಾನವಿಲ್ಲದೇ) ಸಹಬಾಳ್ವೆಯನ್ನು ಹಂಚುವ ಕ್ಷೇತ್ರ.



**ಕುರುಕ್ಷೇತ್ರ**

ಅಹರ್ನಿಶಿ (ನಿರಂತರ) ಆವರಿಸಿಕೊಂಡು ಇಳಿಜಾರಿನಲ್ಲಿ ಈಡಾಡಿಸಲು ಉದ್ಗತಿಸಿದ ಊರ್ಮಿಯಂತೆ (ಅಲೆಯಂತೆ) ಋದ್ಧಿಸಿ ಎಣೆಯಿಲ್ಲದೆ ಏರಾಟದೊಡನೆ (ಪೈಪೋಟಿಯೊಡನೆ) ಐಲುಗೊಳಿಸಿ (ಮರಳುಮಾಡಿ) ಒಬ್ಬೊಬ್ಬರಲ್ಲೂ ಓತಪ್ರೋತವಾಗಿ ಔದ್ಧತ್ಯದಿಂದ ಅಂತರಂಗದಲ್ಲಿ ಕ್ರಮತಪ್ಪಿಸಿ ಖೂಳ ಗುಣದೊಡನೆ ಘಾಸಿಗೊಳಿಸಿಕೊಂಡು ಚಪಲಕ್ಕೀಡಾಗಿ ಛಿದ್ರಗೊಂಡು ಜನರನ್ನು ಝುಂಕಣಿಸುತ್ತಾ (ನಿಂದಿಸುತ್ತಾ) ಟವಳಿಸಿ (ವಂಚಿಸಿ) ಠಾವುಗೊಡದೆ (ಎಡೆಬಿಡದೆ) ಡಂಬಾಚಾರದಿ (ತೋರಿಕೆಯ ನಡವಳಿಕೆಯಿಂದ) ಢಕ್ಕೆಬಿದ್ದರೂ ತೃಷೆಯಾರದಿರುವುದು ಥಕ್ಕು (ಆಶ್ಚರ್ಯ)! ದ್ವಂದ್ವತೆಯನ್ನು ಧಮನಿಯಲಿ ನೆಲೆಗೊಳಿಸಿಗೊಂಡ ಪರಿಗೆ ಫುಲ್ಲವಾದ ಬಂಡತನವು ಭಂಗುರವಾಗಲು (ನಾಶವಾಗಲು) ಮುಕುಂದನ ಯಾಚಿಸಬೇಕು ರಕ್ಷಣೆಗಾಗಿ ಲಕ್ಷ್ಯವಿಟ್ಟು ವೃದ್ಧಿಸುವುದಾಗ ಶಮನಗೊಳಿಸಲು ಷಡರಿಗಳನ್ನು ಸರಾಗವಾಗಿ ಹೊಮ್ಮುವ ಕ್ಷಮತೆ.



**ಕೊರಗು**

ಅನವರತ ಆಕಾಂಕ್ಷೆಯನ್ನು ಇತಿಶ್ರೀಗೆ ಈಡುಮಾಡುವ ಉಣ್ಮೆಯ (ನಿಲವು) ಊರ್ಣನಾಭನಂತೆ (ಜೇಡನಂತೆ) ಋಜು (ನೇರ) ಎಣೆಯಾದ (ಸಮನಾದ) ಏವದ (ತಾತ್ಸಾರದ) ಐಬು ಒಡಲಲ್ಲಿನ ಓಜಸ್ಸನ್ನು (ಶಕ್ತಿಯನ್ನು) ಔಪಚಾರಿಕವಾಗಿ ಅಂತ್ಯಗೊಳಿಸಿ ಕ್ರಮೇಣ ಖಚಿತವಾಗಿ ಗತ್ಯಂತರವಿಲ್ಲದೆ ಘೋರ ಚಡಪಡಿಕೆಯಿಂದ ಛಿದ್ರತೆಗೊಳಗಾಗುವ ಜನರನ್ನು ಝುಂಜಾಟಿನ ಟಂಗುಹರಿದ (ಬಡತನದ) ಠಿಕಾಣಿಯಿಂದ ಡಾಲಿನ (ಸುರಕ್ಷಿತ) ಢಾಳಿನಲ್ಲಿ (ಮಾದರಿಯಲ್ಲಿ) ತೆರವುಮಾಡಿ ಥಟ್ಟುಗೊಳಿಸೆಂದು (ಒಟ್ಟುಸೇರಿಸೆಂದು) ದಕ್ಷನಾದ ಧಣಿಯನ್ನು ನೆನೆಯುತ್ತಿದ್ದರೆ ಪಟ್ಟುಬಿಡದೆ ಫಲಿತಾಂಶದ ಬಯಕೆಯನ್ನು ಭಂಗಗೊಳಿಸಿ ಮನಸ್ಸಿಗೆ ಯಮಯಾತನೆಯನ್ನು ರವಾನಿಸಿದನ ಲೀಲೆಗೆ ವಿಧಿಯಿಲ್ಲದೇ ಶರಣಾದರೂ ಷಕ್ಕಿಲ್ಲದೇ (ಅನುಮಾನವಿಲ್ಲದೇ) ಸಂತ್ರಸ್ತರಿಗೋಸ್ಕರ ಹಂಬಲಿಸುವ ಕ್ಷಿತಿ (ದುರ್ಬಲತೆ)



**ಜಾಗತೀಕರಣ**

ಅಸ್ತಿಭಾರ (ತಳಪಾಯ) ಆದದ್ದೇ ಇಂದ್ರಜಾಲವನ್ನು ಈರ್ಷ್ಯೆಯಿಂದ ಉಡಾಯಿಸಿ ಊಹಿಸಲಾಗದಷ್ಟು ಖಣಿಗಾರರನ್ನಾಗಿಸಲು ಎಗ್ಗಿಲ್ಲದೇ ಏರ್ಪಾಟು ಮಾಡಿ ಐಕ್ಯಮತ್ಯವನ್ನು ಒಡೆದು ಓಡಿಸಲು, ಔಪಚಾರಿಕವಾಗಿ ಅಂಗೀಕರಿಸಲೆಂದು ಕಟ್ಟಳಿಸುತ್ತಾ, ಖೋಡಿತನದಲ್ಲಿ (ದುರುಳತನದಲ್ಲಿ) ಗದ್ದಲವಿಲ್ಲದೆ, ಘಳಿಗೆಯರಿವಿಲ್ಲದ ಚಂಡಮಾರುತದಂತೆ ಛೇದಿಸಿ ಜನಸಾಮಾನ್ಯರನ್ನು ಝರ್ಜರತೆಯಲ್ಲಿರಿಸಲು ಟೊಂಕಕಟ್ಟಿ, ಠಕ್ಕುತನದೆ (ಸೋಗುಹಾಕಿ) ಡೊಂಕು ಢಾಂಬಿಕತೆಯ (ಮಹತ್ತಾಗಿ ಕಾಣುವ) ತದ್ರೂಪಿನಲ್ಲಿ ಥಳುಕಿಸುವಂತೆ ದರ್ಪಣಿಸಿ (ಪ್ರತಿಬಿಂಬ ತೋರಿಸಿ) ಧಾಷ್ಟಿಕತನದೆ (ಮುನ್ನುಗ್ಗಿ) ನಡೆದು ಪಕ್ಕಾದ ಫಲಿತಾಂಶವನ್ನು ಬಯಸಿ ಭಾವರಹಿತತೆಯಲ್ಲಿ ಮಗ್ನರಾಗಿ ಯುಕ್ತವಲ್ಲದ ರಂಗಕ್ಕಿಳಿಸಲು ಲಭ್ಯವಿರುವ ವಾಸ್ತವಿಕ ಶಕ್ತಿಯುಳ್ಳ ಷಡ್ಯಂತ್ರದ ಸಂಕೇತವಾದ ಹೊಳ್ಳಿನ (ನಾಲಾಯಕ್ಕಾದ) ಕ್ಷುದ್ರತೆ (ದುರವಸ್ಥೆ)



**ಜಾಹೀರಾತು**

ಅನವರತ, ಆಮಿಷದ ಇಳಿಜಾರಿನಿಂದ ಈಚೆಗೆ ಉಳಿದು ಊರ್ಜಿತರಾಗಿ ಋದ್ಧಿಸಲು (ಬೆಳೆಯಲು) ಎಡೆಬಿಡದೆ, ಏಕತಾನದೇ ಐಬಿಲ್ಲದೆ ಒತ್ತಾಯಿಸುವ ಓಟವನ್ನು ಅಂಗೀಕೃತಗೊಳಿಸಲೆಂದು ಕರ್ತವ್ಯನಿರತರಾದವರೆದುರು ಖಾತರಿ ಗ್ರಾಹಕರಾರೂ, ಘೋರ ಚಾಲ್ತಿಯಲ್ಲಿರುವ ಛಾನಸನೀತಿಯೆಂಬ (ವಿಳಂಬನೀತಿ) ಜ್ವಾಲೆಯ ಝಳಪನ್ನು ಟರಾಯಿಸಲೆಂದು (ತಡೆಯಲೆಂದು) ಠೀಕಾಗಿ ಡೊಕ್ಕರಿಸಲು (ಬಡಿಯಲು) ಢಾಳಾದ (ಸರಿಯಾದ) ತಂತ್ರವಿಲ್ಲದೆ ಥರಥರನೆ ದಿನಂಪ್ರತಿ ಧಾರಾಳವಾಗಿ ನುಣುಚಿಕೊಳ್ಳಲಾಗದಂತೆ ಪತನದೆಡೆಗೆ ಫಲಕಾರಿಯಾಗಿ ಬಲು ಭದ್ರವಾಗಿ ಮಂತ್ರಮುಗ್ಧಗೊಳಿಸಲು ಯಥಾವತ್ತಾಗಿ ರಂಗಕ್ಕಿಳಿದಿರುವ ಲೋಭ ವರ್ಧಿಸಲು, ಶ್ರೇಷ್ಠ ಷಡ್ಯಂತ್ರದ ಸಂಕೀರ್ಣವಾದ ಹರಿದ್ವರ್ಣದ ಕ್ಷೇತ್ರ!



**ಜೀವನ್ಮೌಲ್ಯಗಳು**

ಅನವರತ ಆಚರಿಸಿಕೊಂಡು ಇಹಲೋಕದ ಈಚೆಗೆ ಉಳಿದು ಊರ್ಜಿತರಾಗಲೆಂದು ಋಷಿಗಳು ಎಲ್ಲರಿಗೋಸ್ಕರ ಏಕೈಕ ಐಶ್ವರ್ಯವನ್ನು (ವಿಧಾನವನ್ನು) ಒದಗಿಸಿದ್ದು; ಓದಿಕೊಂಡು (ವೇದವಿದ್ಯೆ) ಔದಾರ್ಯದಿಂದ (ವಿನಯದಿಂದ) ಅಂಕೆಮೀರದೆ ಕದುಪಿನ (ಧೃತಿ) ಖಜಾನೆಯನ್ನು ಗೆದ್ದ ಘಟ್ಟದಲ್ಲಿ (ಸ್ಥಿತಿ) ಚೈತನ್ಯದಿಂದಿರಲು (ಪ್ರಾಣ) ಛಲದಿಂದ ಜ್ಞಾನ ಝರಿಯನ್ನು ಟೊಳ್ಳಾಗಿಸದೇ ಠೀಕಾಗಿ ಡಾಲಾಗಿಸಿಕೊಂಡು ಢಾಂಬಿಕ ತಿಳಿವನ್ನು (ಮೇಧ) ಥಳಿಸಿ ದಮನಿಸಿ ಧರ್ಮಾರ್ಥ ನಿಧಿಧ್ಯಾಸನತೆಯ ಪ್ರಜ್ಞೆಯನ್ನು ಫಲವತ್ತಾಗಿಸಲು ಬಲ, ಭಕ್ತಿಯಿಂದ ಮನನಿಸುತ್ತಾ ಯೋಗವನ್ನು ರಕ್ಷಿಸಿಕೊಂಡು ಲಕ್ಷಣವನ್ನು (ಶೀಲ) ವೇದವೇದ್ಯದ ಶ್ರವಣಕ್ಕೆ ಷಕ್ಕಿಲ್ಲದೇ ಸ್ವಹಿತವರ್ಜಿಸಿದರುಂಟು (ವೈರಾಗ್ಯ) ಹದಿನೆಂಟರ ಕ್ಷೀರಾಬ್ಧಿ!



**ಜೀವನದ ಸಾರ್ಥಕ್ಯತೆ**

ಅಣುವಿನ ಆಕಾರದಿಂದಿಳೆಗಿಳಿದು ಇಬ್ಬಗೆಯಲ್ಲಿ ಈಜುತ್ತಾ, ಉಚ್ಛ್ರಾಯಗೊಳ್ಳಲು ಊಂಕಿನಿಂದ (ವಿವೇಚನೆಯಿಂದ) ಋಜುತ್ವದಲ್ಲಿ (ಪ್ರಾಮಾಣಿಕವಾಗಿ) ಎಲ್ಲಾ ಏರಿಳಿತಗಳನ್ನೊಳಗೊಂಡ ಐಹಿಕತೆಯನ್ನು ಒಮ್ಮುಗೊಳಿಸಲು (ತುಂಡರಿಸಲು) ಓಗೊಟ್ಟು ಔಪಚಾರಿಕತೆಯ ಅಂಗಳದ ಕದನವನ್ನು ಖಡಕ್ಕಾಗಿ ಗೆಲ್ಲುವುದಕ್ಕಿರುವ ಘನವಾದ ಚರ್ಯೆಯನ್ನು ಛಿದ್ರಗೊಳಿಸಿ ಜಟಿಲವಾಗಿಸಿಕೊಂಡು ಝರ್ಜರಿತ ಟೊಂಗೆಯಲ್ಲಿ ಠಿಕಾಣಿಸಿ ಡೊಂಬನಂತೆ (ಹಗ್ಗದ ಮೇಲೆ ನಡೆಯುವವನ ರೀತಿ) ಢಾಂಬಿಕತೆಯ ತೊತ್ತಾಗಿ ಥರಗುಟ್ಟುತ್ತಾ ದಿನಚರಿಯನ್ನು ಧಳುಕಾಗಿಸುವೆನೆಂಬ ನಂಬಿಕೆಯಿಂದ ಪ್ರಚ್ಛನ್ನದ (ಅಂತಸ್ಸತ್ವದ) ಫಲೀಕರಣವನ್ನು ಬದಿಗಿರಿಸಿ ಭವಪಾಶಕ್ಕೆ ಮರುಳಾಗಿ ಯಾವಾಗಲಾದರೊಮ್ಮೆ ರಾಗದ್ವೇಷಗಳನ್ನು ಲಂಘಿಸಿದರೆ (ಹಾರಿ ದಾಟಿದರೆ) ವಶವಾಗದು ಶಿವನ ಷೋಡಶಕರ್ಮ; ಸಂಪೂರ್ಣವಾಗಿ ಹೆಡಕಟ್ಟಿದರೇನೇ ಕ್ಷಿಪ್ತತೆಗೆ (ಚಂಚಲ ಮನಸ್ಸಿಗೆ) !



**ದಶಾವತಾರ**

ಅರಿವನ್ನೇ ಆದ್ಯತೆಯನ್ನಾಗಿಸುವ ಇರಾದೆಯೊಂದಿಗೆ ಈಶನು ಉದ್ಯುಕ್ತನಾಗಿ ಊರ್ಜನ್ನು (ಶಕ್ತಿಯನ್ನು) ಋಜುವಾಗಿ ಎಕತ್ಯಾರಿಸುತ್ತಾ (ನಿಗ್ರಹಿಸುತ್ತಾ) ಏಳಿಗೆಯೆಡೆಗೆ ಐತರಿಸಲು (ಬಳಿಸಾರಲು) ಒಡನಾಡಿಯಾಗಿ ಓನಾಮದೊಂದಿಗೆ ಔದಾರ್ಯದಿಂದ ಅಂತರ್ದೃಷ್ಟಿಯ ಕಟಾಕ್ಷವನ್ನು ಖಾತರಿಯಾಗಿ ಗಮ್ಯಸ್ಥಾನದ ಘಟ್ಟದೆಡೆಗೆ ಚಲಿಸುವ ಛಾತಿಯನ್ನು ಜನಜನಿತಗೊಳಿಸಲು ಝರಿಯಂತೆ ಟಾವಿಕೆಯನ್ನು (ಜ್ಞಾನವನ್ನು) ಠೇವಣಿಯಾಗಿಸಲು ಡಮರುಗವನ್ನು ಢಿಕ್ಕಿಸಿ ತಮಸ್ಸನ್ನು ಥಳಿಸಲು ದಶಾವತಾರವನ್ನು ಧರೆಯಲ್ಲಿ ನಳನಳಿಸಿ ಪಾಮರರನ್ನು ಫಲೋದಯದೆಡೆಗೆ ಬರಸೆಳೆಯಲು ಭ್ರಮಿಸುತ್ತಿದ್ದವರಿಗೆ ಮಹತ್ತತ್ವದ ಯಶಸ್ಸಿನ ರಹಸ್ಯವನ್ನು ಲೀಲಾಮಯನು ವಿಶದಪಡಿಸಿ ಶಾಶ್ವತವಾಗಿ ಷಡರಿಗಳನ್ನು ಸಂಹರಿಸಲು ಹೊಮ್ಮಿದ ಕ್ಷಮ.



**ದೂರದರ್ಶನ**

ಅಸಂಗತ ಆಕರ್ಷಣೆಯಿಂದ ಇಡೀದಿನ ಈಕ್ಷಿಸಿ (ನೋಡುತ್ತಾ) ಉಜ್ವಲ ಊಳಿಗಮಾನ್ಯರನ್ನಾಗಿಸಲು (ಜೀತದಾಳು) ಋಕ್ಕಿಸಿ (ಭಜಿಸಿ) ಎಡಬಿಡದೆ ಏಮಾರಿಸುತ್ತಾ ಐಹಿಕದಲ್ಲೇ ಒಪ್ಪ ಓರಣವಾಗಿ ಔಪಚಾರಿಕತೆಯಿಂದ ಅಂಧಾಭಿಮಾನವನ್ನು (ಸ್ವಪ್ರತಿಷ್ಠೆಯನ್ನು) ಕ್ರಮಬದ್ಧವಾಗಿ ಖಚಿತಗೊಳಿಸಲು ಗೋಜಲುಮಯವಾದ ಘಟನಾವಳೀಗಳನ್ನು ಚತುರ ಛಲದಿಂದ ಜನಸ್ತೋಮದಲ್ಲಿ ಝರಿಯಂತಾಗಿಸಲು ಟೊಂಕಕಟ್ಟಿ ಠೀವಿಯಿಂದ ಡೊಂಬನಂತೆ (ಹಗ್ಗದ ಮೇಲೆ ನಡೆಯುವವ) ಢಾಲಿನ (ಕ್ಷೇಮದ) ತಂತ್ರದಲ್ಲಿ ಥಳಥಳಿಸುವ ದಿನಚರಿಯಾಗಿಸುವ ಧೋರಣೆಯೊಂದಿಗೆ ನಡೆಸುವ ಪಣತೊಟ್ಟು ಫಲಾಫಲಗಳ ಬಣದಲ್ಲಿ ಭದ್ರವಾದ ಮಜಲನ್ನೇರಿ ಯಶಸ್ಸನ್ನು ರಕ್ಷಿಸಿಕೊಳ್ಳುತ್ತಾ, ಲವಲೇಶವೂ ವೀಕ್ಷಕರ ಶೋಚನೀಯತೆಯ ಷರಾಕ್ಕೆ (ಅಭಿಪ್ರಾಯಕ್ಕೆ) ಸ್ಪಂದಿಸದ ಹಟಮಾರಿ ಕ್ಷಯ!



**ದೃಶ್ಯಮುದ್ರಣದಾಟ (ವೀಡಿಯೋ ಗೇಮ್)**

ಅಲಕ್ಷ್ಯಕ್ಕೀಡುಮಾಡಬೇಕಾದ ಆಟವನ್ನು ಇಷ್ಟಪಟ್ಟು ಈಸುವ (ಗಿರಕಿ ಹೊಡೆಯುವ) ಉತ್ಕಟತೆಯನ್ನು ಊರ್ಜಿತಗೊಳಿಸುವಿಕೆಯ ಋಣಕ್ಕೆ ಎಡೆಬಿಡದೆ ಏರಿಸುವ ಐಬನ್ನು ಒಟ್ಟುಗೂಡಿಸುವ ಓಘಕ್ಕೆ ಔಚಿತ್ಯವಲ್ಲದ ಅಂಕಣವನ್ನು ಕಲ್ಪಿಸಿ ಖೈದಿಯನ್ನಾಗಿಸುವ ಗಾರುಡಿಗನಂತೆ, ಘಾಸಿಗೊಳಿಸಲು ಚಾಚಿಕೊಂಡಿರುವ ಛದ್ಮವೇಷದ ಜಂಗಮನಂತೆ, ಝೇಂಕರಿಸಲು ಟೊಂಕಕಟ್ಟಿದ ಠಕ್ಕನಂತೆ ಡುಬಾಯಿಸಿ (ಮುಳುಗಿಸಿ) ಢಾಳಾಗಿಸಲು ತ್ವರಿತಗತಿಯಲ್ಲಿ ಥಳುಕಿಗೆ ದಾಸನನ್ನಾಗಿಸಲು ಧಮನಿಯಲಿ ನಳನಳಿಸಿ ಪಟ್ಟುಹಿಡಿದ ಫಲಿತಾಂಶವೇ ಬೆರಗಾಗಿಸುವ ಭಂಡಾಟದಿಂದ ಮನೋವ್ಯಾಕುಲತೆಗೊಳಗಾಗಿ ಯಾತನೆಯನ್ನನುಭವಿಸಿ ರುಗ್ಣರನ್ನಾಗಿಸುವ ಲಗಾಮಿಗೆ ವಶವಾಗಿ ಶಿಥಿಲಗೊಳ್ಳುವುದು ಷಕ್ಕಿಲ್ಲದೆ ಸದಾಚಾರ, ಹರಣಗೊಳಿಸುತ್ತಾ ಕ್ಷಮತೆಯನ್ನು!



**ನೆಮ್ಮದಿ**

ಅನ್ಯಮನಸ್ಕತೆಯ ಆಶ್ರಯದಲ್ಲಿದ್ದು, ಇಂದ್ರಿಯಗೋಚರದ ಈಶಾನನನ್ನು (ಸೂರ್ಯನನ್ನು) ಉಪೇಕ್ಷಿಸಿ ಊಹಾತ್ಮಕ ಋಜುವಾತಾದ ಎಚ್ಚರಗೇಡಿಯಂತೆ ಏಕಸ್ವಾಮ್ಯತೆಯಿಂದ ಐಹಿಕದಲ್ಲಿ ಒಂದರಿಯಾಡುತ್ತಾ ಓರಣತಪ್ಪಿದ ಔರಸದಿಂದ (ಸಕಾರಣದಿಂದ) ಅಂತರ್ದೃಷ್ಟಿ ಕಳೆದುಕೊಂಡು, ಖರೆ ಗ್ರಹಿಕೆಯ ಘನವಾದ ಚಕ್ಷುವನ್ನು (ಕಣ್ಣನ್ನು) ಛಿದ್ರಗೊಳಿಸಿಕೊಂಡು ಜಗದಲ್ಲೆಲ್ಲಾ ಟವಳಿಯಾಗಿ (ಕೃತ್ರಿಮವಾಗಿ) ಠೀವಿಯಿಂದ ದಾವುರುತ್ತಾ (ಬಾಯಾರಿದವನಂತೆ) ಢಕ್ಕೆಬಿದ್ದು (ಬಳಲುತ್ತಾ) ತಲ್ಲಣಿಸಿ ಥರಗುಟ್ಟುವ ದಾರಿಯಲ್ಲಿ ಧಾವಂತದಿಂದ ನಡೆಯದೆ ಪಟ್ಟುಹಿಡಿದು, ಫಲದಾಯಕವಾದ ಬತ್ತಲೆಯ ಭರಪೂರಿತ ಮನಸ್ಸಿನಾಳದಲಿ ಯಜಮಾನನಂತೆ ರಚನಾತ್ಮಕ ಲಗಾಮಿನೊಂದಿಗೆ ವಿವೇಕಯುತವಾಗಿ ಶಿಕಾರಿಯಾಡಿ ಷಡರಿಗಳನ್ನು (ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ) ಸಂಹರಿಸುವ ಹೇತುವೇ (ಸಂಕಲ್ಪವೇ) ಕ್ಷೇಮ (ನೆಮ್ಮದಿ)!



**ಪ್ರಕೃತಿ**

ಅಲ್ಲಿಗೆ ಆತನ ಇರಾದೆ ಈಡೇರಿತ್ತೇನೊ? ಉಪಾಸಕನಾಗಿ ಊರಿನಲ್ಲಿದ್ದ ಋಷಿಯು ಎಂದಿನಂತಲ್ಲದೆ ಏಕಾಏಕಿಯಾಗಿ ಐಕ್ಯನಾಗಲೆಂದು ಒಡನೆಯೆ ಓಡಿದನೆಂದೆನಿಸಿ ಔದಾರ್ಯದಿಂದ, ಅಂತರ್ಧಾನನಾಗುವವನನ್ನು ಕಳಕಳಿಯಿಂದ ಖಡಕ್ಕನೆ ಗಮನಿಸಲು ಘಳಿಗೆಯರಿವಿಲ್ಲದೆ ಚಕಚಕನೆ ಛಲವಿರಿಸಿಕೊಂಡು ಜಂಗಮನನ್ನುಳಿಸಲು ಝರಿಗಿಳಿದೆ ಟಗರಿನಂತೆ ಠರಾವಿನೊಡನೆ (ಸಂಕಲ್ಪದೊಂದಿಗೆ) ಡೌಲಿನಿಂದ (ಆಡಂಬರದಲ್ಲಿ) ಢಾಲಿಯೊಡನೆ (ಜೋಪಾನದಲ್ಲಿ) ತಡಕಾಡುತ್ತಾ ಥಟ್ಟನೆ ದಕ್ಷತನದಲ್ಲಿ ಧನಾತ್ಮಕ ನಡಿಗೆಯ ಪಣದೊಂದಿಗೆ ಫಲಿತಾಂಶ ಬಯಸಿ ಭಾವನಾತ್ಮಕ ಮನಸ್ಸಿನಲ್ಲಿ ಯತ್ನಿಸುತ್ತಿರುವಾಗ ರಪ್ಪನೆ ಲಗ್ಗೆಯಿಟ್ಟಿತು ವಾರಿಯ (ನೀರಿನ) ಶಕ್ತ ಷಡ್ಯಂತ್ರದ ಸುಳುಹೇ ... ಹತಭಾಗ್ಯನ ಕ್ಷೋಭೆ



**ಪ್ರಾರ್ಥನೆ**

ಕ್ಷೋಭೆಗೊಳಗಾಗಿದ್ದ ಹದಿಹರೆಯ, ಸಂಕ್ರಮಣಕ್ಕೆ ಷರತ್ತಿಲ್ಲದೆ ಶರಣಾಗಲು ವಿವೇಕದಿಂದ ಲಾವಣ್ಯವತಿಯೊಂದಿಗಿನ ರಾಸಲೀಲೆಗೆ ಯಾಚಿಸಿದಾಗ, ಮಂದಹಾಸದೊಡನೆ ಭಂಗಗೊಳಿಸಿದಳಾ ಬೆಡಗಿಯು ಫಾಲಬರಹವನ್ನು (ಹಣೆಬರಹವನ್ನು) ಪತನಗೊಳಿಸಲೆಂದೇ ನಖಶಿಖಾಂತ ಧಿಕ್ಕರಿಸಿ ದೂರವಾಗುತ್ತಿದ್ದವಳಿಗೆ, ಥಳುಕಿನಿಂದ ತಣಿಸುವ ಢಾಂಬಿಕತೆಯಿಂದ (ಮಹಾನ್ ಉದ್ದೇಶದಿಂದ) ಡೊಂಕು (ಬಾಗಿದ) ಠೀಕಿನ (ಸೊಗಸಾದ) ಟೆಕ್ಕೆಯನ್ನು (ಬಾವುಟವನ್ನು) ಝುಳಪಿಸಿ ಜಾಲಾಡಿದಾಗ ಛಾವಸವಾಗಿ (ವಿಳಂಬವಾಗಿ) ಚಾರುಗೊಂಡಳು (ಒಪ್ಪಿಕೊಂಡಳು) ಘಟಿಸುತ್ತಿದ್ದ ಗಂಭೀರ, ಖಚಿತವಾದ ಕಲ್ಲೋಲ್ಲಕ್ಕೆ ಅಂಕಪರದೆಯನ್ನು ಔರಸವಾಗಿ (ಸರಿಯಾಗಿ) ಓಸರಿಸಿದಂತೆ (ಅಂಗೀಕಾರದಂತೆ)! ಒಂಟಿತನಕ್ಕೆ ಐಬು ಏಳದಂತೆ ಎಂದೆಂದಿಗೂ ಋಕ್ಕಿಸಿ (ಪ್ರಾರ್ಥಿಸಿ) ಊರ್ಜಿತರಾದ ಉಭಯರಿಗೆ ಈಡೇರಿದ ಇಂಥಹ ಆನಂದ ಅನುಗಾಲವಿರಲಿ ...



**ಪಾಂಡವರು**

ಅವಮಾನ ಆದರೇನು? ಇತ್ಯರ್ಥಿಸಿದರು ಈಶನು ಉಳಿಸಿ ಊರ್ಧ್ವಕ್ಕೇರಿಸುವನೆಂದು ಋಜುವೀರರಾಗಿದ್ದೂ, ಎಡೆಬಿಡದೆ ಏಗಿದರೂ ಐಕ್ಯಮತ್ಯವನ್ನು ಒಡೆದುಕೊಳ್ಳದೇ ಓಜಸ್ಸಿನಲ್ಲಿದ್ದರು ಔತ್ಸುಕ್ಯಕ್ಕೊಳಗಾಗದೆ ಅಂತ್ಯಗೊಳಿಸಲು ಕೌರವರ ಖೋಡಿತನವನ್ನು, ಗೌಣಗೊಳಿಸಲು ಘಟನೆಯಿಂದಾದ ಚಿತ್ತಚಾಂಚಲ್ಯವನ್ನು, ಛಲದಿಂದ ಜಯಿಸಿ ಝೇಂಕರಿಸಲು ಟೀಕೆಗಳನ್ನು ಠೀವಿಯನ್ನು ಡಾಲಾಗಿಸಿಕೊಂಡು (ಅಡಿಗಲ್ಲಾಗಿಸಿಕೊಂಡು) ಢಾಳುತನದಲಿ (ಜಾಣತನದಲಿ) ತೊಂದರೆಗಳನ್ನು ಥಳಿಸುತ್ತಾ, ದಮನಿಸಿ ಧೈರ್ಯದಿಂದ ನಡೆದು ಪಡೆದ ಫಲಿತಾಂಶಕ್ಕೆ ಬದ್ಧರಾಗಿ ಭಕ್ತಿಯಿಂದ ಮುಕುಂದನನ್ನು ಯಥೇಚ್ಛವಾಗಿ ರಮಿಸುತ್ತಾ ಲವಲೇಶವೂ ವ್ಯಸನಕ್ಕೊಳಗಾಗದೆ ಶಮನಿಸಲು ಷಡ್ವೈರಿಗಳನ್ನು ಸುಲಲಿತವಾಗಿ ಹಪಹಪಿಸಿದ ಕ್ಷತ್ರಿಯರು.



**ಪುಸ್ತಕ**

ಅಗ್ಗಳಿಕೆಯನ್ನು ಆಮೂಲಾಗ್ರವಾಗಿ ಇಳಿಮುಖದೆಡೆಗೆ ಈಡುಮಾಡಲು ಉಪಯುಕ್ತವಾದ ಊರ್ಧ್ವ (ಉನ್ನತ) ಋಜುತ್ವದ (ಧೃಡತೆಯ) ಎರಕವನ್ನು ಏಕೀಕೃತದಿಂದ ಐಕ್ಯಗೊಳಿಸಿ ಒಕ್ಕಣಿಸಿ (ಒಟ್ಟಿಗೆ) ಓಸರಿಸಲು (ಫಲ ನೀಡಲು) ಔಪಚಾರಿಕವಾಗಿ ಅಂತರಾಳವನ್ನು ಕಡೆದು ಖಂಡಿಸಿ, ಗೆಲ್ಲಬಲ್ಲೆನೆಂದೆನಿಸಲು ಘನವಾದ ಚಿಂತನೆಗೀಡುಮಾಡಲು ಛಲದಿಂದ ಜಗ್ಗಿ, ಝರಿಯಂತೆ ಟೊಳ್ಳನ್ನು ಠೀವಿಯಿಂದ ಡಿಕ್ಕಿಸಿ ಢಾಂಬಿಕತೆಯನ್ನು ತೆರವುಗೊಳಿಸಿ, ಥಳಥಳಿಸಲು ದಟ್ಟವಾಗಿ ಧಮನಿಯಲಿ ನವೋದಯವನ್ನು, ಪಟ್ಟುಬಿಡದೆ ಫಲಕಾರಿಯಾಗುವವರೆಗೂ ಬೆವರಿಳಿಸಲು ಭಾವಶೂನ್ಯತೆಯಿಂದ ಮಯ್ಮುದುಡಿಯುತ್ತಾ (ಜೊತೆಗೆ ಶ್ರಮಪಡುತ್ತಾ), ಯಶಸ್ಸಿನೆಡೆಗೆ ರವಾನಿಸಲು ಲವಲೇಶವೂ ವರ್ಣಭೇದವಿಲ್ಲದೇ ಶಕ್ತವಾಗಿ ಷರತ್ತಿನಿಂದ ಸಕಲರಿಗೂ ಹಂಚಲ್ಪಡುವ ಕ್ಷೀರ!



**ಪೂಜೆ**

ಅನಾಚಾರದ ಆಚರಣೆಗೆ ಇಂಬು ಈಯ್ದು ಉಡಾಯಿಸಲು ಊಸರವಳ್ಳಿಯಂತೆ ಋಜುವಿನಲ್ಲಿ (ಪ್ರಾಮಾಣಿಕವಾಗಿ) ಎದೆಗುಂದದೆ ಏಕಾಗ್ರತೆಯಿಂದ ಐಹಿಕ ಒಡೆತನಕ್ಕೆ ಓಗೊಟ್ಟು ಔಪಚಾರಿಕತೆಯ ಅಂಕೆತಪ್ಪಿ ಕಟ್ಟಳೆಯನ್ನು ಖಡಕ್ಕಾಗಿ ಗೌಣಗೊಳಿಸಿ ಘೋರತನದ (ಹೀನಕೃತ್ಯದ) ಚಲಾವಣೆಗೆ ಛಲದಿಂದ ಜಪಿಸಿ ಝಳಪಿಸುವ ಟೊಳ್ಳಿನ ಠರಾವಿನ (ನಿರ್ಧಾರದ) ಡೋಲನ್ನು ಢಾಳುತನದ (ಜಾಣತನದ) ತಂತ್ರದೊಂದಿಗೆ ಥಳುಕಿನ ದಿನಚರಿಯಾಗಿಸಿಕೊಂಡು ಧರ್ಮಾಂಧತೆಯಲ್ಲಿ ನಡೆದು ಪಡೆದ ಫಲವನ್ನು ಬಚ್ಚಿಟ್ಟು ಭಂಡತನದೇ ಮಂದಿರಕ್ಕೆ ಯಾಚಿಸಲೆಂದು ರಭಸದಿಂದ ಲಗ್ಗೆಹಾಕುವ ವರ್ತನೆಯ ಶೋಭೆಯು ಷಕ್ಕಿಲ್ಲದ (ಅನುಮಾನವಿಲ್ಲದ) ಸಂಕರದ (ಸ್ವೇಚ್ಛಾಚಾರದ) ಹಂದರವೇ (ಚೌಕಟ್ಟೇ) ಕ್ಷಣಭಂಗುರ (ನಶ್ವರ)!



**ಬನ್ನಂಜೆ ಗೋವಿಂದಾಚಾರ್ಯ**

ಅನವರತ ಆಧ್ಯಾತ್ಮದೆಡೆಗೆ ಇಹದಲ್ಲಿರುವವರನ್ನು ಈಡುಮಾಡುವ ಉದ್ದೇಶದಿಂದ ಊಷ್ಮಿತ ಋಷಿಯಂತೆ ಎದೆಗುಂದದೆ ಏಕಸ್ವಾಮ್ಯವಾಗಿ ಐಹಿಕದಿಂದಾಚೆಗೆ ಒಡಂಬಡಿಸಲು ಓಗೊಡುತ್ತಾ ಔದಾರ್ಯದಿಂದ ಅಂತಃಕರಣವನ್ನು ಕಲಕಿ ಖಂಡಿಸಿ ಗಮ್ಯಸ್ಥಾನದೆಡೆಗೆ ಘಳಿಗೆಯರಿವಿಲ್ಲದೆ ಚಲಿಸಲೆಂದು ಛಲದಿಂದ ಜೀವಿಗಳೆಲ್ಲರು ಝೇಂಕರಿಸಲೆಂದು ಟೊಂಕಕಟ್ಟಿ ಠೀವಿಯಿಂದ ಡಾಲಿಸಲು (ರಕ್ಷಿಸಲು), ಢಾಂಬಿಕತೆಯನ್ನು ತೆರವಾಗಿಸಲು ಥಳುಕಿಲ್ಲದೆ ದುಡಿಯಲು ಧೈರ್ಯದಿಂದ ನಡೆದು ಪರಮಾರ್ಥದ ಫಲಿತಾಂಶವನ್ನು ಬಳುವಳಿಯಾಗಿಸಲು ಭಂಡಾರದಂಥ ಮಧ್ವತತ್ವವನ್ನು ಯಶಸ್ವೀಯಾಗಿ ರಚಿಸುವತ್ತ ಲಕ್ಷ್ಯವಹಿಸಿ ವಿದ್ಯಾವಾಚಸ್ಪತಿಯೆಂದೆನಿಸಿ ಶ್ರದ್ಧಾಪೂರ್ವಕವಾಗಿ ಷಡರಿಗಳ ಸಹವಾಸದಿಂದಾಚೆಗೆ ಹೊರಳಿದ ಕ್ಷತ್ರ.



**ಬಾತ್ಮೀದಾರ**

ಅನಿವಾರ್ಯತೆಗೆ ಆಕರ್ಷಿತನಾಗದೆ ಇದ್ದುದ್ದನ್ನು ಈಕ್ಷಿಸಿ (ಅವಲೋಕಿಸಿ) ಉಚಿತ ಊಹೆಗೆ ಋಣಿಯಾಗದೆ ಎಂದಿಗೂ ಏಕಾಗ್ರತೆಯಿಂದ ಐಹಿತ್ಯರಹಿತ (ದಂತಕತೆಯಿಲ್ಲದೇ) ಒಟ್ಟಾರೆ ಓದುಗರಿಗೋಸ್ಕರ ಔಚಿತ್ಯದಿಂದ ಅಂತ್ರವಾಗಿ (ಧೈರ್ಯವಾಗಿ) ಕಂಡದ್ದನ್ನು ಖಚಿತಪಡಿಸಿಕೊಂಡು ಗತಿಸಿದ ಘಟನೆಗಳನ್ನು ಚಾಚೂತಪ್ಪದೆ ಛಾನಸವಿಲ್ಲದೆ (ವಿಳಂಬವಿಲ್ಲದೆ) ಜನಹಿತಕ್ಕಾಗಿ ಝುರೂರಾಗಿ ಟಿಪ್ಪಣಿಸಿ ಠೀವಿಯಲ್ಲಿ ಡೋಲಾಯಮಾನವಿಲ್ಲದೆ ಢಾಂಭಿಕರಹಿತ ತದ್ವತ್ತಾಗಿ ಥಟ್ಟನೆ ದಕ್ಷತೆಯ ಧ್ಯೇಯೋಕ್ತಿಯೆಡೆಗೆ ನಡೆದು ಪತ್ರಿಕೋದ್ಯಮವನ್ನು ಫಲವತ್ತಾಗಿಸುತ್ತಾ ಬಂಡಾಯವನ್ನು ಭಾವರಹಿತ ಮನೋಸ್ಥಿತಿಯಲ್ಲಿ ಯಶಸ್ವೀಯಾಗಿ ರದ್ದುಪಡಿಸಲು ಲಕ್ಷ್ಯ ವಹಿಸಿ ಶ್ರಮಿಸಲು ಷಕ್ಕಿಲ್ಲದೆ ಸಮರ್ಥ ಹುರಿಯಾಳಾದ ಕ್ಷತ್ರ.



**ಬುದ್ಧ**

ಅರ್ಧರಾತ್ರಿಯಲ್ಲಿ ಆತನು ಇಹದ ಈಷಣಗಳನ್ನು ಉಪೇಕ್ಷಿಸಿ ಊರ್ಧ್ವದೆಡೆಗೆ ಋಜುವಾಗಿ ಏಕಾಂಗಿಯಾಗಿ ಏರಿದ್ದು ಐತಿಹ್ಯ ಒಡಲಿನಲ್ಲಿದ್ದ ಓಲಾಟವನ್ನು ಔದ್ಧತ್ಯದಿಂದ (ದಾರ್ಷ್ಟ್ಯದಿಂದ) ಅಂತ್ಯಗೊಳಿಸಲು ಕ್ರಿಯಾಶೀಲನಾಗಿದ್ದರಿಂದಲೇ ಖ್ಯಾತಿಯಾದನು ಗೌರವಕ್ಕೆ ಘಟಿಸುತ್ತಿದ್ದ ಚರಾಚರಗಳ ಛಿದ್ರಮಯ ಜೀವನದ ಝುರಿಯನ್ನು ಟರಾಯಿಸಲು (ಸರಿಪಡಿಸಲು) ಠರಾವಿಸಿ (ಸಂಕಲ್ಪಿಸಿ) ಡಾಲಾತ್ಮಕ (ರಕ್ಷಣಾತ್ಮಕ) ಢಕ್ಕೆಯೊಡನೆ (ವಿಷಯ ಸೂಚಿಯೊಡನೆ) ತಪಸ್ಸನ್ನಾಚರಿಸಿ ಥಳುಕನ್ನು ದಮನಗೊಳಿಸಲು ಧೈರ್ಯದಿಂದ ನಡೆದ ಪರಿಣಾಮದ ಫಲವನ್ನು ಬಲ್ಲಿದರಿಗೆ ಭವಬಂಧನದಿಂದ ಮುಕ್ತರಾಗಲು ಯುಕ್ತವಾದ ರಹದಾರಿಯನ್ನು ಲಕ್ಷ್ಯದಿಂದ ವರ್ಗಾಯಿಸಿ ಶಾಂತಿಮಂತ್ರದೊಂದಿಗೆ ಷಡರಿಗಳನ್ನೆದುರಿಸುವ ಸಂಜ್ಞಾನವನ್ನು ಹರಡಿದ ಕ್ಷೇತ್ರಜ್ಞ.



**ಭಗವದ್ಗೀತೆ**

ಅರ್ಜುನನ ಆಕುಲವನ್ನು (ಕ್ಷೋಭೆ) ಇಲ್ಲವಾಗಿಸಲು ಈಶನು ಉಪಾಯದಿಂದ ಊರ್ಧ್ವದೆಡೆಗೆ ಋಜುವಾಗಿ ಎಳೆದೋಯ್ದು ಏಮಾರುತ್ತಿದ್ದವನನ್ನು ಐಹಕತೆಯಿಂದಾಚೆಗೆ ಒಗೆದು ಓಜಸ್ಸನ್ನು ಔರಸವಾಗಿ (ಧರ್ಮಸಮ್ಮತವಾಗಿ) ಅಂತರ್ಗತಗೊಳಿಸುತ್ತಾ ಕ್ರಿಯಾಶೀಲನನ್ನಾಗಿಸಲು ಖುದ್ದಾಗಿ ಗೋಪಾಲನು ಘಂಟಾಘೋಷವಾಗಿ ಚೇಗನ್ನು (ಪರಮಸತ್ವವನ್ನು) ಛಾತ್ರನಲ್ಲಿ (ವಿದ್ಯಾರ್ಥಿಯಲ್ಲಿ) ಜತನದಿಂದ ಝೇಂಕರಿಸಲು ಟರಾವಿಸಿ (ನಿರ್ಧರಿಸಿ) ಠೀವಿಯಿಂದ ಡಾಳುತನದೇ (ಕಾಂತಿಯುಕ್ತವಾಗಿ) ಢಾಳಾಗಿರಿಸಲು (ಕ್ಷೇಮದಿಂದಿರಿಸಲು) ತಮಸ್ಸನ್ನು ಥಳಿಸಿ ದೃಷ್ಟಿಕೋನವನ್ನು ಧರ್ಮಯುದ್ಧದೆಡೆಗೆ ನೆಲೆಗೊಳಿಸಲು ಪಣತೊಟ್ಟು ಫಲಕಾರಿಯಾಗಿಸಲು ಬೋಧಿಸಿ ಭಾವಾತಿರೇಕವನ್ನು ಮರ್ಧಿಸಲು ಯದುಕುಲನಂದನು ರಣರಂಗದಲ್ಲೂ ಲಹರಿಯಲಿ ವಿಶ್ವರೂಪವನ್ನು ಶೃತಪಡಿಸಿ ಷಡರಿಗಳನ್ನು ಸದೆಬಡಿಯಲು ಹುರುಪನ್ನುಂಟುಮಾಡಿದ ಕ್ಷಿತೀಶ.



**ಮಡಿವಂತ**

ಅನೈತಿಕತೆಯ ಆಕಾಂಕ್ಷೆಯನ್ನು ಇನ್ನಿಲ್ಲದೆ ಈಡೇರಿಸಿಕೊಳ್ಳಲು ಉಳಿದವರನ್ನು ಊಮೆಯಾಗಿಸಿ (ಪೆದ್ದರನ್ನಾಗಿಸಿ) ಋದ್ಧಿಯಾಗುವೆನೆಂದು ಎಣಿಸಿ ಏಮಾರಿಸುವ ಐಬಿನೊಡನೆ ಒಣ ಓಲಾಟದಿಂದ ಔಪಚಾರಿಕತೆಯ ಅಂಧಶ್ರದ್ಧೆಯನ್ನು ಕರತಲಾಮಲಕವಾಗಿಸಿಕೊಳ್ಳುವ ಖಯಾಲಿಗೆ ಗಂಟುಬಿದ್ದು ಘಾಸಿಗೊಂಡು ಚಡಪಡಿಸುತ್ತಾ ಛಲಬಿಡದೆ ಜನ್ಮಕ್ಕಂಟಿದ ಝುಗೆಯಂತೆ (ನೀಳುಡುಗೆಯಂತೆ) ಟಕಾಯಿಸಿಕೊಳ್ಳುತ್ತಾ (ಆತ್ಮವಂಚನೆ ಮಾಡಿಕೊಳ್ಳುತ್ತಾ) ಠೀವಿಯಲಿ ಡಂಭದ ಢೋಲನ್ನು ತಿಣುಕಾಡುತ್ತಾ ಥಳಿಸುವುದನ್ನು ದಿನಚರಿಯನ್ನಾಗಿಸುವ ಧೋರಣೆಯಲ್ಲಿ ನಡೆದು ಪತಿತನಾದ (ಧರ್ಮ ಬ್ರಷ್ಟನಾದ) ಫಲವಾಗಿ ಬದುಕಿರುವವರೆಗೂ ಭಂಡಬಾಳನ್ನು ಮೈಗೂಡಿಸಿಕೊಂಡು ಯಮಪಾಶಕ್ಕೀಡಾದಾಗ ರಿಕ್ತವಾಗಿರುವ (ಶೂನ್ಯವಾಗಿರುವ) ಲೆಕ್ಕವನ್ನು ವಿವರಿಸಲಾಗದೆ ಶ್ಲೇಷೋಕ್ತಿಗೀಡಾಗಿ (ಸಂದಿಗ್ದತೆಗೀಡಾಗಿ) ಷಕ್ಕಿಲ್ಲದೆ ಸದ್ಗತಿವಂಚಿತನಾಗಿ ಹಪಹಪಿಸಿ ಕ್ಷೀಣಿಸುವವ.



**ಮನಸ್ಸು**

ಅತೀಂದ್ರಿಯವಾದ (ರಹಸ್ಯವಾದ) ಆ ಇಂದ್ರಧನುಸ್ಸು (ಕಾಮನಬಿಲ್ಲು) ಈಡಾಡಿದ (ಚದುರಿದ) ಉಂಡಿಗೆಯಂತೆ (ಅವಕಾಶದಂತೆ) ಊಹಿಸಲಾಗದ ಋಷ್ಯಮೂಕವು (ಜಿಂಕೆಯು) ಎಗರುತ್ತಾ ಏಳುಬೀಳುವಂತೆ ಐಹಿಕ ಒಚ್ಚತೆಯಲ್ಲಿ (ಆನಂದದಲ್ಲಿ) ಓಲಾಡುವುದೇ ಔರಸವೆಂದುಕೊಂಡು (ಉಚಿತವೆಂದುಕೊಂಡು) ಅಂಕೆಯಿಲ್ಲದೆ ಕೆರಳಿದ ಖೇಚರದಂತೆ (ಪಕ್ಷಿಯಂತೆ) ಗಡಿಬಿಡಿಯಿಂದ ಘಾತಕದ ಚರ್ಯೆಯನ್ನು ಛದ್ಮವೇಷದಲ್ಲಿ ಜತನಿಸುತ್ತಾ (ಪ್ರಯತ್ನಿಸುತ್ತಾ) ಝಾಯಿಯಲ್ಲಿ (ಬಾಯಿಯಲ್ಲಿ) ಟಕಾಯಿಸುತ್ತಾ ಠೀವಿಯಲ್ಲಿ ಡಾಲಿಸುತ್ತಾ (ಮೆಚ್ಚಿಸುತ್ತಾ) ಢಾಳುತನವನ್ನು (ಬುದ್ಧಿವಂತಿಕೆಯನ್ನು) ತೋರುತ್ತಾ ಥಳುಕಿನ ದೊಗರನ್ನು (ಹಳ್ಳವನ್ನು) ಧಾರಾಳವಾಗಿ ನ್ಯಾಸಿಸುತ್ತಾ (ನಂಬಿಸುತ್ತಾ) ಪರರನ್ನು ಫುಲ್ಲಿತರನ್ನಾಗಿಸಲು (ಹಿಗ್ಗಿಸಲು) ಬಲು ಭಾವೋದ್ವೇಗದಿಂದ ಮುಖಸ್ತುತಿಸುವ ಯೋಗ್ಯವಲ್ಲದ ರಾಗಮಾಲಿಕೆಯನ್ನು ಲವಲೇಶ ವಂಚನೆಯಿಲ್ಲದೆ ಶತಾಯಗತಾಯ ಷರತ್ತಿನಿಂದ ಸಹಜವಾಗಿ ಹತೋಟಿಯಲ್ಲಿರಿಸಬೇಕಾದ ಕ್ಷತಿ (ಸಂಕೇತ).



**ಮರ್ಯಾದಾಪುರುಷ**

ಅಗಸನ ಆಕ್ಷೇಪವನ್ನು ಇರುಕಿಸದೇ (ನಿರ್ಬಂಧಿಸದೇ) ಈಡೇರಿಸುವ ಉದ್ದೇಶದಿಂದ ಊರೆಗೋಸ್ಕರ ಋಷಿಯ ಎಡೆಯಿಂದ ಏಕದೇಹದಂತಿದ್ದವಳನ್ನು ಐಹಿಕದಾಚೆಗೆ ಒಂಟಿಯಾಗಿ ಓನಾಮದ (ಮೂಲತತ್ವಗಳ) ಔರಸದ (ಸಕಾರಣದ) ಅಂತಃಕರಣದೊಂದಿಗೆ ಕಳುಹಿಸಲು ಖಚಿತಪಡಿಸಿಕೊಂಡಿದ್ದಕ್ಕೆ ಗೊಂದಲವಿಲ್ಲದೆ ಘನತೆವೆತ್ತ ಚರ್ಯೆಯೊಡನೆ ಛಲದಿಂದ ಜನಾದೇಶವನ್ನು ಝೇಂಕರಿಸಲು ಟೊಂಕಕಟ್ಟಿ ಠೀವಿಯಿಂದ ಡೋಲಾಯಮಾನವಾಗಿ ಢಕ್ಕೆಪಡದೆ ತಮಸ್ಸನ್ನು ಥಳಿಸಿ ದಿಟ್ಟತನಕ್ಕೆ ಧ್ವನಿಯಾಗಲು ನಚ್ಚಿಕೊಂಡಿರುವವರಿಗೋಸ್ಕರ ಪುರುಷೋತ್ತಮತೆಯನ್ನು ಫಲೋದಯಿಸಲು ಬದ್ಧನಾಗಿ ಭಾವರಹಿತ ಮಜಲನ್ನೇರಿ ಯಶಸ್ವಿಯಾಗಿ ರಾಜೋಚಿತ ಲಯಕ್ಕೆ ವಶನಾಗಿ ಶೋಭಿಸುತ್ತಾ ಷಕ್ಕಿಲ್ಲದೆ ಸಮಾಜದಲ್ಲಿ ಹೊನಲನ್ನುಳಿಸಿದ ಕ್ಷತ್ರ.



**ಮುದಿತನ**

ಅಪಾರಾನುಭವವನ್ನು ಆಂತರ್ಯದಲ್ಲಿ ಇರಿಸಿಕೊಂಡಿದ್ದರೂ ಈಚೆಗೆ ಉಪೇಕ್ಷೆಗೊಳಗಾದದ್ದನ್ನು ಊಹಿಸಬಹುದು ಋಜುವಾಗಿ ಎಲ್ಲೆಡೆ, ಏಕೆಂದರೆ ಐಕಮತ್ಯದ ಒಡಕುತನದೊಂದಿಗೆ ಓರಗೆಯವರು ಔಪಚಾರಿಕತೆಗೆ ಅಂಜದೆ ಕಡೆಗಾಣಿಸುವಿಕೆಯನ್ನು ಖಾಸಾಗೊಳಿಸಿಕೊಂಡಿರಲು, ಗತಕಾಲದವರೆಂಬುದಕ್ಕವರ ಘನತೆಯನ್ನು ಚ್ಯುತಿಗೊಳಿಸಿ ಛಿದ್ರಮಾಡಿ ಜನ್ಮಜಾತರು ಝಳಪಿಸುತ್ತಿರಲು ಟಣಾಯಿಸಿದ (ನಿಂತ) ಠೀವಿಯ ಡೇಗೆ (ಗಾಳಿಪಟ) ಢಕ್ಕೆಪಡುವಂತಾಯಿತು (ಬೀಳುವಂತಾಯಿತು) ತಡೆಯಿಲ್ಲದೆ ಥಟ್ಟನೆ ದಯನೀಯ ಧಾಮಕ್ಕೆ ನಲುಗಿದ ಪಕಳಿಯಂತೆ ಫಾಲ (ಹಣೆ) ಬರಹದ ಭಾವದಂತೆ ಮುಂದಿನ ಯಾನಕ್ಕೆ ರಹದಾರಿಯನ್ನು ಲಭ್ಯವಾಗಿಸಿಕೊಳ್ಳಲು ವರ್ತಮಾನದಲ್ಲಿ ಶ್ರಮಿಸುತ್ತಾ ಷರತ್ತಿಲ್ಲದೇ ಸಾಕ್ಷಾತ್ಕಾರವನ್ನು ಹುಡುಕಲನುವಾಗುವ ಕ್ಷಣ!



**ರಾಷ್ಟ್ರಪಿತ**

ಅಂದು ಆದ ಇಕ್ಕಟ್ಟಿನಿಂದಾಚೆಗೆ ಈಜಿ ಉಳಿದು ಊರ್ಜಿತರಾಗಿ ಋಜುವಾತುಪಡಿಸಲು ಎಗ್ಗನ್ನೆದುರಿಸಿ ಏಕಾಂಗಿಯಾಗಿ ಐತಿಹಾಸಿಕ ಒಪ್ಪಂದಕ್ಕೆ ಓಗೊಡಿಸಲೆಂದು ಔದಾಸೀನ್ಯವಿಲ್ಲದೇ ಅಂತ್ಯದವರೆಗೂ ಕ್ರಮಬದ್ಧವಾಗಿ ಖಂಡಿಸುತ್ತಾ ಗೆಲ್ಲಲು ಘಳಿಗೆಯರಿವಿಲ್ಲದೆ ಚಳುವಳಿಗಳನ್ನು ಛಲದಿಂದ ಜನ್ಮಭೂಮಿಗೋಸ್ಕರ ಝಳಪಿಸಲು ಟೊಂಕಕಟ್ಟಿ ಠೀವಿಯಿಂದ ಡಗೆಯಬ್ಬಿಸುತ್ತ (ಕಾವೇರಿಸುತ್ತ) ಢಕ್ಕೆಬೀಳಿಸುವ (ಆಘಾತ ಉಂಟುಮಾಡುವ) ತಂತ್ರಗಳನ್ನು ಥಳುಕಿಲ್ಲದ ದಿಟ್ಟತನದೆ ಧರ್ಮಯುದ್ಧದನುಸಾರ ನಾಡಿನ ಪ್ರಜೆಗಳ ಫಲಸಿದ್ಧಿಗೋಸ್ಕರ ಬರಸಿಡಿಲಿನಂತೆ ಭಯರಹಿತ ಮುಖಂಡತ್ವದ ಯುಕ್ತಿಯೊಂದಿಗೆ ರಂಗಕ್ಕಿಳಿದದ್ದು ಲೋಕವೆಲ್ಲಾ ವೀಕ್ಷಿಸುವಂತಾಗಿ ಶರಣಾದವರಿಂದ, ಷರತ್ತಿಲ್ಲದೆ ಸ್ವದೇಶವೆಂಬ ಹೊನಲುಬೆಳಕನ್ನುರಿಸಿದ ಕ್ಷಾಂತ (ಅವಿನಾಶ)



**ರುದ್ರಭೂಮಿ**

ಅವಸಾನ ಆದಮೇಲೆ ಇರಬೇಕಾಗಿದ್ದ ಈ ಉತ್ತರದಾಯಿತ್ವ (ಹೊರೆ) ಊರಲ್ಲೆಲ್ಲಾ ಋಜುವಾಗಿ (ನೇರವಾಗಿ) ಎಲ್ಲೆ ಮೀರಿ ಏಡಿಯಂತೆ ಐತರಾಗಲು (ಬಳಿಸಾರಲು) ಒತ್ತರೆಯೇ (ಪ್ರಚೋದನೆಯೇ) ಓರೆಯೆಂಬ (ಅಸಮಾನತೆಯೆಂಬ) ಔರಸವೇ (ಸಕಾರಣವೇ) ಅಂಕೆಯಿಲ್ಲದ ಕಾರ್ಖಾನೆಗಳ ಖಯಾಲಿನಿಂದ ಗತ್ಯಂತರವಿಲ್ಲದೆ ಘೋರವಾದ ಚರಮವಾಕ್ಯವನ್ನು ಛದ್ಮವೇಷಿಗಳಾಗಿ ಜನಜನಿತಗೊಳಿಸಲು ಝಳಹೊಡೆದು (ಉಗ್ರನೋಟದಿಂದ) ಟಕ್ಕುತನದೇ ಠೇಂಕರಿಸಿ (ಸೊಕ್ಕಿನಿಂದ) ಡಾಲುರಹಿತ (ರಕ್ಷಣೆಯಿಲ್ಲದೆ) ಢಿಕ್ಕಿಸಿ ತೊತ್ತಾಗುತ್ತಾ (ದಾಸನಾಗಿ) ಥಟ್ಟುರಿಯನ್ನು (ಕಿಚ್ಚನ್ನು) ದಳ್ಳುರಿಯಂತಾಗಿಸಿ (ಮಹಾಜ್ವಾಲೆಯಂತಾಗಿಸಿ) ಧಗಧಗಿಸಲು ನೇಪಥ್ಯದಲ್ಲಿ ಪುಷ್ಟಿಗೊಳಿಸಿದ ಫಲಿತಾಂಶವೇ ಬದುಕುಳಿಯಲು ಭದ್ರತೆಯಿಲ್ಲದೆ ಮರುಗುವ ಯಮಯಾತನೆಯ ರಂಗಸ್ಥಳವಾಗಿ ಲಭ್ಯವಾದ ವಾಸ್ತವಿಕ ಶಾಪಗ್ರಸ್ತ ಷಂಡ (ಸತ್ವವಿಲ್ಲದ) ಸಂಕೀರ್ಣವಾದ ಹುಳ್ಳು (ಕೆಲಸಕ್ಕೆ ಬಾರದ) ಕ್ಷೋಣಿ (ನೆಲ)



**ವಸಂತ ಕಾಲ**

ಅನಾವರಣಗೊಳಿಸಲು ಆನಂದಾತಿಶಯವನ್ನು ಇಳೆಯಲ್ಲಿ ಈಶಾನ್ಯನಂತೆ (ಸೂರ್ಯನಂತೆ) ಉಕ್ಕಿ ಊರ್ಧ್ವತೆಯ (ಉನ್ನತ) ಋತುವನ್ನು ಎಲ್ಲೆಲ್ಲೂ ಏಕಚ್ಛತ್ರಾಧಿಪತಿಯ ಐಶ್ವರ್ಯದ ಒಳಹರಿವು (ಅಂತಃಪ್ರವಾಹ) ಓಘವಾಗಿ (ಗುಂಪಾಗಿ) ಔರಸಕ್ಕೆ (ಸಕಾರಾಣಕ್ಕೆ) ಅಂಗಣದಲ್ಲಿನ (ಭೂಮಿಯಲ್ಲಿನ) ಕಗ್ಗದ (ಖಾಲಿಯಾದ) ಖನಿಯ (ಗಣಿಯ) ಗುಂಡಿಗೆ (ಹಳ್ಳಕ್ಕೆ) ಘನವಾದ ಚೇತನವನ್ನು ಛಾವಣಿಯಂತೆ ಜಾರಿಸಿ ಝಳಪಿನ (ವೈಭವದ) ಟೊಪ್ಪಿಯನ್ನು ಠೀಕಾಗಿ (ಸೊಗಸಾಗಿ) ಡಿಕ್ಕಿಸಿದಂತೆ (ತೊಡಿಸಿದಂತೆ) ಢಾಲಿನ (ಕ್ಷೇಮವಾಗಿರಿಸುವ) ತೆರದಿ (ನಿಟ್ಟಿನಲ್ಲಿ) ಥೈಲಿಯಲ್ಲಿನ (ಚೀಲದಲ್ಲಿನ) ದುಡಿದ ಧನದಂತೆ ನ್ಯಾಯಸಮ್ಮತ, ಪಕ್ಷಪಾತವಿಲ್ಲದ ಫಲವತ್ತತೆಯನ್ನು ಬಳುವಳಿಯಾಗಿ ಭದ್ರತೆಯೊಂದಿಗೆ ಮಂಜೂರಾದ ಯಶಸ್ವೀ ರಸಭರಿತ ಲಹರಿಯಂಥ (ಸಂಕೇತವಾದ) ವಂತಿಗೆಯೆ (ಕೊಡುಗೆಯೆ) ಶಿಶಿರನ ಷಡ್ದರ್ಶನ (ಮೀಮಾಂಸೆ, ವೇದಾಂತ, ನ್ಯಾಯ, ವೈಸೇಷಿಕ, ಸಂಖ್ಯಾ ಮತ್ತು ಯೋಗ) ಸದೃಶವಾದ ಹಚ್ಚನೆಯ ಕ್ಷತಿ (ಸಂಕೇತ).



**ವಿದ್ಯಾಲಯ**

ಅಮಿತವಾದ ಆದರ್ಶತನದ ಇಂಬಿಗೆ ಈಡುಮಾಡಲು ಉಪಾಧ್ಯಾಯರೆಲ್ಲರನ್ನು ಊಹೆಗೂ ನಿಲುಕದ ಋಷಿಗಳಂತೆ, ಎಲ್ಲರಿಗೂ ಏಳಿಗೆಯನ್ನಷ್ಟೇ ಐಚ್ಛಿಕವಾಗಿ ಒಟ್ಟುಗೊಳಿಸಲೆಂಬ ಓಘಕ್ಕೆ ಔದಾರ್ಯಪೂರ್ಣ ಅಂಕಣವನ್ನು ಕಲ್ಪಿಸಿ, ಖಂಡಿತ ಗಣನೀಯವಾದ ಘನತೆಯುಳ್ಳ ಚಟುವಟಿಕೆಗಳನ್ನು ಛಲದಿಂದ ಜಯಿಸಿ ಝೇಂಕರಿಸಲೆಂದು ಟೊಂಕಕಟ್ಟಿಕೊಂಡು ಠರಾವಿಸಿ (ಸಂಕಲ್ಪಿಸಿ) ಡೋಲಾಯಮಾನವಿಲ್ಲದೇ ಢಾಲಿನಲಿ (ಜೋಪಾನವಾಗಿ), ತಂತಾನೆ ಥಟ್ಟನೆ ದಕ್ಷತೆಯ ಧಾಟಿಯಲ್ಲಿ ನಳನಳಿಸಲು ಪಂಥಕಟ್ಟಿ ಫಲಕಾರಿಯಂಥ ಬಟ್ಟೆಯಿಳಿಸಲು, ಭದ್ರವಾದ ಮಂಚೂಣಿಯನ್ನು ಯಥೋಕ್ತವಾಗಿ ರೂಪಿಸಲು ಲವಲೇಶ ವಂಚನೆರಹಿತ ಶಕ್ತಿದುಂಬಿ ಷಕ್ಕಿಲ್ಲದೆ ಸಮರ್ಥತೆಯೆಡೆಗೆ ಹಂತಹಂತವಾಗೇರಿಸುವ ಕ್ಷೇತ್ರ.



**ವಿದೂಷಕ**

ಅಡಗಿಹುದು ಆತನಲಿ ಇತರರು ಈರ್ಷ್ಯೆಪಡುವಂಥಹ ಉಂಬಳಿಯಾದರೂ (ಪ್ರತಿಭೆಯಾದರೂ) ಊರ್ಜಿತನಾಗುವುದಿಲ್ಲ ಋಜುವಾಗಿ ಎಂದೆಂದಿಗೂ ಏಕೆಂದರೆ ಐನಾದಲ್ಲಿನ (ಕನ್ನಡಿಯಲ್ಲಿನ) ಒಡಕಿನ ಓರೆಯ ಔನ್ನತ್ಯದಂತೆ ಅಂತರಂಗವನ್ನು ಕದಡಿ ಖರೆ ಗತ್ಯಂತರವಿಲ್ಲದೆ ಘೋರವಾಗಿ ಚಡಪಡಿಸಲೆಣಿಸಿ ಛಲತೊಟ್ಟ ಜಗದೀಶನ ಝಳವನ್ನೆದುರಿಸಲು ಟಲಾಯಿಸಿ (ಮುನ್ನುಗ್ಗಿ) ಠೀಕಾಗಿ ಡೌಲಿನ (ವರ್ಣರಂಜಿತ) ಢಾಲದಲ್ಲಿ (ರಕ್ಷಣೆಯಲ್ಲಿ) ತಡವರಿಸುತ್ತಾ ಥಳುಕಿನ ದಸಿಗೂಡ (ಗೂಟದ ಸುತ್ತಾ) ಧಾವತಿಸಿ (ಶ್ರಮಿಸಿ) ನಗೆಯಲ್ಲುಕ್ಕುಳುಗಿಸಲು ಪ್ರೇಕ್ಷಕರನ್ನು ಫೇರಿಯ (ಇಂದ್ರಜಾಲದ) ಬೆನ್ನಟ್ಟಿ ಭಂಡಾಟವನ್ನು ಮೆರೆಯುತ್ತಾ ಯೋಗಕ್ಷೇಮವನ್ನು ರೂಪಿಸಿಕೊಳ್ಳಲು ಲಕ್ಷ್ಯ ವಹಿಸಿದರೂ ಶಹೊಂದಿ (ಸೋಲನ್ನೊಂಡು) ಷಕ್ಕಿಲ್ಲದೆ ಸಂವರಣೆಗೊಳ್ಳುವನು (ಸಿದ್ಧಗೊಳ್ಳುವನು) ಹಟಬಿಡದೆ ಕ್ಷಿಪ್ರವಾಗಿ.



**ಶ್ರೀಕೃಷ್ಣ**

ಅವನು ಆವಿರ್ಭವಿಸಿದ್ದೇ ಇಹದಲ್ಲಿನ ಈಶಾನನಂತೆ ಉಚ್ಚಾಟಿಸಿ ಊನವನ್ನು ಋಜುವಾಗಿ ಎಲ್ಲರನ್ನು ಏಳಿಗೆಯೆಡೆಗೋಯ್ಯಲು ಐಹಿಕದ ಒಡನಾಟಕ್ಕೆ ಓಗೊಟ್ಟಿದ್ದಕ್ಕುಂಟಾದ ಔತ್ಸುಕ್ಯವನ್ನು ಅಂತ್ಯಗೊಳಿಸಲು ಕಂಸಾದಿಗಳನ್ನು ಖುದ್ದಾಗಿ ಗೆದ್ದು ಘೋಷಿಸಿದ್ದು ಚಿತ್ತವಿಕಾರತೆಯನ್ನು ಛೇದಿಸಿ ಜಗಕುಪಕರಿಸುವೆನೆಂಬ ಝೇಂಕಾರವನ್ನು ಟಣಾಯಿಸುವೆ (ತಡೆಯುವೆ) ಠಕ್ಕತನದ ಡಿಕ್ಕಿಸುವಿಕೆಯನ್ನು ಢಾಲದೊಂದಿಗೆ (ರಕ್ಷಣೆಯೊಂದಿಗೆ) ತಮಸ್ಸಿನ ಥಳಕುಪಳಕನ್ನು (ಮಿಥ್ಯಾರೂಪವನ್ನು) ದಮನಿಸಿ ಧರೆಯಲ್ಲಿ ನಳನಳಿಸಲು ಪರಂಜ್ಯೋತಿಯನ್ನು ಫಣಾಮಣಿಯಂತೆ ಬದುಕಿರುವಾಗಲೇ ಭವದಿಂದ ಮುಕ್ತರಾಗುವಿಕೆಯ ಯಶೋದಾರಿಯೆಡೆಗೆ ರಹದಾರಿಯನ್ನು ಲವಲವಿಕೆಯಿಂದ ವಶಮಾಡಿಕೊಳ್ಳಲು ಶ್ರಮಿಸಲೆಂದು ಷಕ್ಕಿನಿಂದ ಸಹಕಾರವನ್ನು ಹರಿಸುತ್ತಿರುವ ಕ್ಷೇಮೆಂದ್ರ



**ಶ್ರೀಮಂತ**

ಅಧೀನವಾಗುವ ಆ ಇನಿದಾದ ಈಡೇರಿಕೆಯನ್ನು ಉಚಿತವಾಗಿ ಊರ್ಜಿತಗೊಳಿಸದೆ ಋಣಕ್ಕೆ ಎಡೆಯಾದವನಂತೆ ಏಗುತ್ತಾ ಐಸಿರಿಯ ಒಡನಾಟಕ್ಕೆ ಓಗೊಟ್ಟು ಔಚಿತ್ಯದಿಂದ ಅಂತಸ್ತನ್ನೇರುವ ಕನಸಿನಲಿ ಖೈದಿಯಾಗಿ ಗತ್ಯಂತರವಿಲ್ಲದೆ ಘನೀಕೃತಗೊಂಡು ಚಡಪಡಿಸುತ್ತಾ ಛಿದ್ರವಾಗಿ ಜೇಡರಬಲೆಯ ಝುಲ್ಲಿಯಲ್ಲಿ (ತುದಿಯಲ್ಲಿ) ಟರಾಯಿಸುತ್ತಾ (ಬಿಕ್ಕಟ್ಟಿನಲ್ಲಿ) ಠಿಕಾಣಿಸಿ ಡೊಕ್ಕರವಾದ (ಹಿರಿದಾದ) ಢಾಂಬಿಕತೆಯಲ್ಲಿ ತೇಲುತ್ತಾ ಥಟ್ಟನೆ ದಯನೀಯವಾದ ಧರ್ಮಸಂಕಟದಲ್ಲಿ ನಲುಗಿದ ಪಡಲಿನ (ಅನುಭವದ) ಫಲವಾಗಿ ಬಳಲಿ ಭಂಡನಂತೆ ಮರುಗದೆ, ಯಾವಾಗಲೂ ರೋಧಿಸದೆ ಲಭ್ಯವಾಗಿರುವ ವರಣದ (ಆಯ್ದ) ಶೇಷತ್ವದಲ್ಲಿ ಷರತ್ತಿಲ್ಲದೇ ಸಂತೃಪ್ತಿಯನ್ನು ಹಾಸುಹೊಕ್ಕಾಗಿಸಿಕೊಂಡವನೇ ಕ್ಷಮವಂತ (ಯೋಗ್ಯ)



**ಶೂದ್ರ**

ಅಭಿಭವವಾದರೂ (ಸೋಲನ್ನುಂಡರೂ) ಆಘಾತಗೊಳ್ಳದೇ ಇತರರಭೀಷ್ಟೆಯನ್ನು ಈಡೇರಿಸಲು ಉತ್ಸುಕತೆಯ ಊರುಗೋಲಾಗಿ ಋಜುತ್ವದಿಂದ (ಪ್ರಾಮಾಣಿಕತೆಯಿಂದ) ಎಗ್ಗಿಲ್ಲದೆ ಏಕಾಗ್ರತೆಯ ಐಚ್ಛಿಕದೊಡನೆ ಒಡಂಬಡಿಸಿದ ಓಘದಂತೆ (ಪ್ರವಾಹದಂತೆ) ಔದಾರ್ಯದಿಂದ ಅಂತಸಾಕ್ಷಿಯೊಡನೆ ಕರ್ಮವನ್ನು ಖಚಿತವಾಗಿಸುವ ಗುಣದೊಂದಿಗೆ ಘಟಿಸಲು ಚಕಾರವೆತ್ತದೆ ಛಲದಿಂದ ಜಾಗೃತಿಗೊಳಿಸಿ ಝಳಪಿಸಲು ಟೊಂಕಕಟ್ಟಿ ಠಕ್ಕಿಲ್ಲದೆ (ಸೋಗಿಲ್ಲದೆ) ಡಾವುರಕ್ಕೆ (ಬಯಕೆಗಳಿಗೆ) ಢಿಕ್ಕಿಸಿ ತನ್ಮೂಲಕ ಥಟ್ಟನ್ನು (ಕಿಚ್ಚನ್ನು) ದಮನಿಸಿ ಧರ್ಮಾರ್ಥವಾಗಿ ನಿಷ್ಕಲ್ಮಷ ಪರಿಚಾರಕನಂತೆ ಫಲೋದಯಕ್ಕೆ ಬಾಗದೆ ಭಾವಶೂನ್ಯತೆಯಲ್ಲಿ ಮುಳುಗಿ ಯಥೋಚಿತವಾಗಿ ರೂಪುಗೊಂಡು ಲಕ್ಷ್ಯವಿಟ್ಟು ವ್ರತಕ್ಕೆ ಶರಣಾಗಿ ಷರತ್ತಿಲ್ಲದೆ ಸಂತೋಷದಿಂದ ಹರವಿಕೊಂಡ ಕ್ಷಾಂತ (ಸಹಿಷ್ಣುತ)



**ಶೃಂಗಾರ**

ಅಳುಕಿನಿಂದ, ಆಕರ್ಷಿಸಲು ಇಲ್ಲಸಲ್ಲದ ಈಹೆಯನ್ನು (ಪ್ರಯತ್ನವನ್ನು) ಉತ್ಕಟದಿಂದ ಊಡಿಸಿ (ಒದಗಿಸಿ) ಋಜುವಾತುಗೊಳಿಸಲು ಎಗ್ಗಿಲ್ಲದೆ ಏಕಾಂಗಿಯಾಗಿ ಐನಾದೆದುರು (ಕನ್ನಡಿಯೆದಿರು) ಒಪ್ಪ ಓರಣವಾಗಿಡುವೆನೆಂದು ಔಚಿತ್ಯದಿಂದ ಅಂದ(?)ವನ್ನು ಕಣ್ಣುಕಟ್ಟಿನ (ಆತ್ಮವಂಚನೆ) ಖಯಾಲಿಗೆ ಗುರಿಯಾಗಿ ಘನ ಚಟುವಟಿಕೆಯನ್ನು ಛಲವೆಂಬ ಜೇಡರಬಲೆಯ ಝಳಪಿನಲ್ಲಿ ಟಪ್ಪೆಯಾಗಲು (ನೆಲೆಯಾಗಲು) ಠರಾವಿಸಿ (ತೀರ್ಮಾನಿಸಿ) ಡಕ್ಕೆಯಲ್ಲಿ (ಅಟ್ಟಣಿಗೆಯಲ್ಲಿ) ಢಾಲಿನಲ್ಲಿರುವೆನೆಂಬ (ಅಡಗಿರುವೆನೆಂಬ) ತೋರಿಕೆಯಲ್ಲಿ ಥಳುಕಿನ ದೇಹವನ್ನು ಧಾರಾಳವಾಗಿ ನಳನಳಿಸುವೆನೆಂದು ಪ್ರಕೃತಿಗೆದಿರು ಫಲವಿಲ್ಲದ ಬಯಕೆಯ ಭ್ರಮೆಯೆಂಬ ಮುಸುಕನ್ನೆಳೆದುಕೊಂಡು ಯಥೇಚ್ಛವಾಗಿ ರೂಪಿಸಲು ಲಕ್ಷ್ಯವಹಿಸಿ ಶ್ರಮಿಸುವ ಷೋಕಿಯ ಸಂಚಿನ ಹುಸಿಯಾದ ಕ್ಷಿತಿಜ!



**ಸಂಗೀತ**

ಅನಾದಿಯಲ್ಲಿ ಆಲಾಪವು ಇಳೆಯಲ್ಲೆಲ್ಲಾ ಈಡಾಡಿದ್ದಕ್ಕೇನೋ ಉಳಿದು ಊರ್ಜಿತಗೊಂಡು ಋತುಗಳ ಎಗ್ಗಿಲ್ಲದೆ ಏಕಸ್ವಾಮ್ಯವಾಗಿ ಐಹಿಕ್ಯದಲ್ಲಿರುವವರ ಒತ್ತಾಸೆಯಾಗಲೆಂಬ ಓಘಕ್ಕೆ ಔರಸದ (ಸಮರ್ಥನೀಯ) ಅಂದುಗೆಯಂತೆ (ಪ್ರಸಾದನದಂತೆ) ಕಲೆತು ಖನಿಯಾಗಿ, ಗಂಧರ್ವಲೋಕದ ಘಂಟಾನಾದದ ಚೈತನ್ಯದಾಯಕ ಛಾಪನ್ನು (ಲಕ್ಷಣವನ್ನು) ಜೀವಜಂತುಗಳಿಗೆಂದೇ ಝರಿಯಂತೆ ಟಣಕಿಸುತ್ತಾ (ಪುಟಿದೇಳುತ್ತಾ) ಠೀವಿಯಿಂದ ಡೊಗರಿನಲ್ಲಿ (ಭೂಲೋಕದಲ್ಲಿ) ಢಾಲಾಗಿಸಲು (ಉಳಿಸಲು) ತಂತಾನೇ "ಥಕ ದೀಂ" ಧ್ವನಿಯಲ್ಲಿ ನೆಲೆಗೊಳ್ಳಲು ಪಕ್ಕವಾದ್ಯಗಳ ಫಿರಕಿನೊಡನೆ (ವಿಭಾಗದೊಡನೆ) ಬದುಕಿನಲ್ಲಿ ಭಾವಪರವಶತೆಯನ್ನು ಮಂಡಿಸಲು ಯಥಾವತ್ತಾಗಿ ರವಾನಿಸಿ ಲಗಾಮಿಲ್ಲದ ವ್ಯೆಸನವನ್ನು ಶಮನಮಾಡಿ, ಷಡರಿಗಳನ್ನು (ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ) ಸಮೂಲವಾಗಿ ಹರಣಮಾಡುವ ಕ್ಷಮ (ಯೋಗ್ಯತೆಯುಳ್ಳದ್ದು)



**ಸಂತಾನ**

ಅಂಕುರಫಲವಾದ ಆ ಇಂಚರವು ಈರ್ವರ ಉಡಿಗೆ ಊಡಿಸಲು (ಪೋಷಿಸಲು) ಋಜುಮಾರ್ಗವನ್ನಷ್ಟೇ (ಸತ್ಯಮಾರ್ಗವನ್ನಷ್ಟೇ) ಎಚ್ಚರಿಕೆಯಿಂದ ಏರಿ ಐಬಿಲ್ಲದೆ ಒಕ್ಕೊರಲಿನಿಂದ ಓನಾಮವನ್ನು ಔದಾರ್ಯದೊಡನೆ ಅಂಕಿತಗೊಳಿಸಿ, ಕ್ರಮಬದ್ಧವಾಗಿ ಖ್ಯಾತಿಯಾಗುವಂಥಹ ಗುಣವನ್ನು ಘನತೆಯಿಂದ ಚಾಚೂತಪ್ಪದೆ ಛಲದಿಂದ ಜಯಗಳಿಸಿ ಝೇಂಕರಿಸಲು ಟಿಪ್ಪಣಿಗಳನ್ನು ಠೇವಣಿಯಂತಿರಿಸುವಂತೆ, ಡೊಂಕು ಢಕ್ಕೆಯಲ್ಲಿನ (ಬಂದರಿನ) ತೊತ್ತಾಗದೆ ಥಳಥಳಿಸುವ ದೃಢತೆಯೊಂದಿಗೆ ಧ್ವನಿಸಲು ನಿಷ್ಕಲ್ಮಷ ಪಟ್ಟುಹಿಡಿದು ಫಲದಾಯಕ ಬಟ್ಟೆನಲ್ಲಿ (ಕಾರ್ಯಕ್ಷೇತ್ರದಲ್ಲಿ) ಭಾವಪರವಶತೆಯಿಂದ ಮಗ್ನರಾಗಲು ಯಥಾವತ್ತಾಗಿ ರಂಗಕ್ಕಿಳಿಯಲು ಲಭ್ಯವಾದ ವರದಂತಹ ಶೋಭಾಯಮಾನ, ಷಡ್ಗುಣ ಸಂಪನ್ನತೆಯ ಸಹೃದಯತೆಯನ್ನು ಹೊಂದಿರುವ ಕ್ಷೇಮಾಭ್ಯುದಯಿತ್ವ.



**ಸಮಾಜ**

ಅರಿತುಕೊಳ್ಳಲು ಆಮೂಲಾಗ್ರವಾಗಿ ಇತಿಮಿತಿಯಿಲ್ಲದೇ ಈಸಿ ಉಡಿಯೊಳಗೆ ಊಂಕಿಸಲು (ಮನನ ಮಾಡಲು), ಋಜುವಾಗಿ (ನೇರವಾಗಿ) ಎದುರಿಸಲು ಏಕಾಂಗಿಯಾಗಿ ಐಬಿಲ್ಲದೇ (ಕೊರತೆಯಿಲ್ಲದೆ) ಒಂದೇಸಮನೆ ಓಜಸ್ಸಿನೊಡನೆ (ಧೈರ್ಯದೊಡನೆ) ಔದಾಸಿನ್ಯವಿಲ್ಲದೆ ಅಂಬುಧಿಯಲ್ಲಿ (ಕಡಲಿನಲ್ಲಿ) ಕಲ್ಪಿಸಲಾಗದ ಖೋಡಿಗೆಯನ್ನು (ಅಪಾಯವನ್ನು) ಗೆಲ್ಲಬಲ್ಲೆನೆಂದು ಘೋಷಿಸಲು ಚ್ಯುತಿಯಿಲ್ಲದೆ ಛಲವಾದಿಯಾಗಲು, ಜರೂರು ಝುಗಝುಗಿಸಲು, ಟೊಳ್ಳು ಠಕ್ಕುಗಳನ್ನಲ್ಲದೆ (ಸೋಗುತನಗಳನ್ನಲ್ಲದೆ) ಡಬ್ಬುಗಳನ್ನು (ಅಯೋಗ್ಯತನವನ್ನು) ಢಿಕ್ಕಿಸಿ ತಳ್ಳಿಹಾಕಲು ಥಟ್ಟನೆ ದಕ್ಷತೆಯಿಂದ ಧನಾತ್ಮಕ ನಂಬಿಕೆಯಿಂದ ಪಟ್ಟುಹಿಡಿದು ಫಲಿತಾಂಶವೇನೇಯಿರಲಿ ಬಗೆಹರಿಸಿಕೊಳ್ಳಲು ಭಂಗಪಡದೆ ಮುನ್ನಡೆಯಲು ಯಥಾವತ್ತಾಗಿ ರೂಪಿಸುವ ಲೌಕಿಕತೆಯ ವರ್ಣರಂಜಿತ, ಶ್ರೇಷ್ಠ ಷಡ್ಯಂತ್ರಗಳ ಸಾಗರದಂತೆ ಹೊಳೆಯುತ್ತಿರುವ ಕ್ಷಿತಿಜ (ದಿಗಂತ)



**ಸುನಾಮಿ**

ಅಗಾಧವಾದ ಆಘಾತಕಾರಕವನ್ನು ಇಡುಕಾಗಿ (ನಿಚ್ಚಳವಾಗಿ) ಈಟಿಯಂತೆ ಉನ್ಮತ್ತತೆಯಿಂದ ಊನಗೊಳಿಸಲು ಋಜುವಾಗಿ ಎಗ್ಗಿಲ್ಲದೆ ಏಕಪಕ್ಷೀಯವಾಗಿ ಐತರಿ (ಬಳಿಸಾರಿ) ಒಕ್ಕಲೆಬ್ಬಿಸಲು ಓಡುತ್ತಾ ಔರಸವಲ್ಲದ (ನ್ಯಾಯಸಮ್ಮತವಲ್ಲದ) ಅಂತ್ಯವನ್ನು ಕರುಣೆಯಿಲ್ಲದೆ ಖಾತ್ರಿಪಡಿಸಿಕೊಳ್ಳಲು ಗತ್ತಿನಲಿ ಘಳಿಗಯರಿವಿಲ್ಲದೆ ಚಂಚಲತೆಯ ಛಲದಿಂದ ಜಲಪ್ರಳಯವನ್ನು ಝೇಂಕರಿಸಲು ಟರಾಯಿಸಿ (ನಿರ್ಧರಿಸಿ) ಠೀಕಾಗಿ ಡಮರನ್ನು (ಕೋಲಾಹಲವನ್ನು) ಢಿಕ್ಕಿಸುತ್ತಾ ತಾಂಡವವಾಡಲು ಥಳುಕಿನಿಂದ ದುರ್ಭರವಾಗಿ (ತೀವ್ರವಾಗಿ) ಧಾವಿಸಿ ನರಜಂತುಗಳಿಗೆ ಪ್ರಮಾದದ ಫಲನ್ನುಣಿಸಿ ಬದುಕಿನಲಿ ಮಮಕಾರವನ್ನು ಯುಕ್ತಿಯಿಂದ ರಿಕ್ತಗೊಳಿಸಿಕೊಳ್ಳದೆ ಲೊಡ್ಡಾಗುವ ವಿರುದ್ಧ ಶ್ರಮಿಸಲು ಷಕ್ಕಿಲ್ಲದೆ ಸಹಕಾರಿಯಾಗುವ ಕ್ಷತಿ (ಹುಣ್ಣು)



**ಹಕ್ಕೋಲೆ (ಪೇಟೆಂಟ್)**

ಅನರ್ಘ್ಯವಾದ (ಅಮೂಲ್ಯವಾದ) ಆಕರವನ್ನು (ಸಂಪತ್ತನ್ನು) ಇಳೆಯಲ್ಲಿರುವವರೆಲ್ಲರೂ ಈರ್ಷ್ಯೆಪಡದೆ ಉಂಡು ಊರ್ಜಿತರಾಗಲೆಂದು ಋಜುವಾಗಿ (ನೇರವಾಗಿ) ಎರೆದಿದ್ದರೆ (ಧಾರಾಕಾರವಾಗಿ ಸುರಿದಿದ್ದರೆ) ಏಮಾರಿಸಿ ಐಕ್ಯಮತ್ಯವಿಲ್ಲದೇ ಒಬ್ಬರೇ ಓಕರಿಸಿಕೊಳ್ಳುವಷ್ಟು (ಕಕ್ಕುವಷ್ಟು) ಔಚಿತ್ಯದೊಂದಿಗೆ (ಜಾಣ್ಮೆಯೊಂದಿಗೆ) ಅಂಕೆತಪ್ಪಿಸಿ ಕಸಿದುಕೊಳ್ಳಲು ಖಳನಾಯಕ ಗತ್ತಿನಲ್ಲಿ ಘಾತಕದ ಚಟುವಟಿಕೆಗಳನ್ನು ಛಲಬಿಡದೇ ಜನರೆಲ್ಲರನ್ನು ಝರ್ಜರಿತಗೊಳಿಸಲು ಟೋಪಿಯನ್ನು ಠೀಕಾಗಿ ಡಿಕ್ರಿಯ (ಕಾಯಿದೆಯ) ಢಾಲಿನಲ್ಲಿ (ರಕ್ಷಣೆಯಲ್ಲಿ) ತಡೆಯಿಲ್ಲದೆ ಥೈಲಿಯನ್ನು ದಷ್ಟಪುಷ್ಟವಾಗಿಸುವ ಧಾವಂತದಲ್ಲಿ ನಗದೀಕರಣದಿಂದಲೇ ಪರಮೋಚ್ಚ ಫಲೋದಯವೆಂದು ಬಗೆದು ಭಂಡತನದಲಿ ಮೋಸಗಾರಿಕೆಯನ್ನು ಯಾಪಾರವನ್ನಾಗಿಸಿ ರುಗ್ಣರಾಗಿ (ಅಸ್ವಸ್ಥರಾಗಿ) ಲವಲೇಶ ವರ್ತನೆಯ ಶಿಷ್ಟಾಚಾರದ ಷಕ್ಕಿಲ್ಲದೆ ಸಾರಾಸಗಟಾಗಿ ಹಕ್ಕುಸಾಧಿಸುವ ಕ್ಷೋಭೆ (ದುರಾಸೆ)



**ಹದಿನೆಂಟರ ಮಹತ್ವ**

ಅನ್ನ, ಆಕಾಶ ಇಂದ್ರಿಯಗಳೊಂದಿಗೆ ಈಸುತ್ತಾ ಉದಕದೊಡನೆ ಊರ್ಜಿತರಾಗುವೆವೆಂದು ಋಜುವಾಗಿ ಎಡತಾಕಿ ಏರುವಿಕೆಯೆಂಬ ಐಬಿನ ಒಡಲಿಗೆ ಓಗೊಡದೆ ಔಚಿತ್ಯದಿಂದ ಅಂತಃಕರಣ, ಕರ್ಮಗಳನ್ನು ಖಂಡಿಸಿ ಗಾಳಿಯನ್ನು ಘಟ್ಟಿಸಿ ಚಿರಂತನದೆಡೆಗೆ ಛಲದಿಂದ ಜೀವಜಾತನು ಝೇಂಕರಿಸಲು ಟಕಾಯಿಸಿ ಠೀವಿಯಿಂದ ಡಿಕ್ಕಿಸಿ ಢಾಲಿನಲಿ ತಪಸ್ಸಿನ ಥಳುಕನ್ನು ಧಮನಿಸಿ ಧೂರ್ತ ನಾಮದಾಸೆಗೊಳಗಾಗದೆ ಪ್ರಕೃತಿಯೊಡನೆ ಫೂತ್ಕರಿಸಿ ಬೆಂಕಿ, ಭೂಮಿ ಮಂತ್ರಗಳನ್ನು ಯಕಃಶ್ಚಿತ್‌ಗೊಳಿಸಿಕೊಂಡು ರಭಸದಿಂದ ಲೋಕದಲ್ಲಿನ ವೀರ್ಯದ ಶ್ರದ್ಧೆಯನ್ನು ಷಕ್ಕಿಲ್ಲದೇ ಸಾರಾಸಗಟಾಗಿ ಹೊರದೂಡಿದರೆ ಕ್ಷರನಕ್ಷರನಾಗಬಹುದು!



**ಹಸಿವು**

ಅಸೂಯೆಯ ಆಗರವಾಗಿ, ಇತಿಮಿತಿಯಿಲ್ಲದ ಈಹೆಯ (ಆಸೆಯ) ಉತ್ಕಟ ಊರೆಯೊಂದಿಗೆ (ಆಸರೆಯೊಂದಿಗೆ) ಋಣದ ಎಗ್ಗಿಲ್ಲದೆ ಏಮಾರಿಸಿ ಐಶ್ವರ್ಯವನ್ನು ಒಬ್ಬೊಬ್ಬರಿಂದಲೂ ಓತಪ್ರೋತವಾಗಿ ಔತ್ಸುಕ್ಯದಿಂದ ಅಂಕೆಯಿಲ್ಲದೇ ಕಬಳಿಸಲು ಖಾತರಿಯಾಗಿ ಗುಪ್ತ ಘಟನೆಗಳನ್ನು ಚಲಾಯಿಸಲು ಛದ್ಮವೇಷಿಯಾಗಿ ಜನರನ್ನು ಝುಂಜಾಟಕ್ಕೀಡುಮಾಡುವ ಟಕ್ಕತನದೇ ಠೇವಣಿಯನ್ನು ಡೇರೆಯಲ್ಲಿ ಢಕ್ಕಿಸುವ (ತಳ್ಳುವ) ತಂತ್ರಗಾರಿಕೆಯೊಂದಿಗೆ ಥೈಲಿಯನ್ನು ದಪ್ಪವಾಗಿಸಲು ಧಾರಾಳವಾಗಿ ನಟಿಸಿ ಪರರನ್ನು ಫನಗೊಳಿಸಲು (ಅಳಿಸಲು) ಬಲು ಭಾವಾವೇಷದಿಂದ ಮೋಸದ ಯತ್ನವನ್ನು ರಾಗೋನ್ಮತ್ತತೆಯಿಂದ ಲೆಕ್ಕಿಸದೆ ವಂಚಿಸುತ್ತಾ ಶಕ್ತನಾಗಲು ಷಡ್ಯಂತ್ರವನ್ನು ಸಂಕೋಚವಿಲ್ಲದೇ ಹಾಸುಹೊಕ್ಕಾಗಿಸಿಕೊಂಡ ಕ್ಷತಿ (ಹುಣ್ಣು)



**ಹಿತೈಶಿ**

ಅನವರತ ಆಕಾಂಕ್ಷೆಯಿಂದ ಇದಿರುಬದಿರಾಗಿದ್ದು ಈರ್ಷ್ಯೆರಹಿತ ಉತ್ಕಟತನದಿಂದ ಊರ್ಧ್ವದ (ಉನ್ನತ) ಋಜುವಿನಂತೆ (ವೀರನಂತೆ) ಎಂದೆಂದೂ ಏಕಾಗ್ರತೆಯಿಂದ ಐನಾದಂತೆ (ಕನ್ನಡಿಯಂತೆ) ಒಳ್ಳುಣವನ್ನರುಹಿದ ಓಜನಂತೆ (ಗುರುವಿನಂತೆ) ಔದಾರ್ಯದಿಂದ ಅಂತರಾಳವನ್ನು ಕೆದಕಿ ಖನನಿಸಲು (ಅಗೆಯಲು) ಗೈರತ್ತಿನಲಿ (ಧೈರ್ಯದಿಂದ) ಘಟಿಸಿ (ಪ್ರಯತ್ನಿಸಿ) ಚತುರ ಛಲದಂಕಮಲ್ಲನಂತೆ ಜಟಿಲತೆ, ಝುರ್ಝುರಿತೆಯನ್ನು ಟರಾಯಿಸಲು (ಸರಿಪಡಿಸಲು) ಠೀವಿಯಿಂದ ಡೋಲಾಯಮಾನವಾಗದೆ ಢಾಳಿನಿಂದ (ಬುದ್ಧಿವಂತಿಗೆಯಿಂದ) ತಹಬಂದಿಗೆ ಥಟ್ಟನೆ ದ್ರವಿಸಲೋಸುಗ ಧೀರೋದ್ಧಾತ ನಡವಳಿಕೆಯ ಪಟ್ಟಿನಿಂದ ಫಲಪ್ರದ ಬೆಳಕನ್ನು ಭವಿಷ್ಯದೆಡೆಗೆ ಮೂಡಿಸಲು ಯುಕ್ತ ರೂವಾರಿಯಂತೆ ಲಕ್ಷ್ಯ ವಹಿಸಿ ಶಕ್ಯಾನುಸಾರ ಷರತ್ತಿಲ್ಲದೆ ಸಮಯೋಚಿತ ಹಾದಿತೋರುವ ಕ್ಷಾಂತಾಮಯಿ (ಸಹನಾಮಯಿ)



**ಹೊಟ್ಟೆಕಿಚ್ಚು**

ಅಂತರಾಳದಲ್ಲಿ ಆಶ್ರಯಿಸಿರುವ ಇಡುಗಂಟೆಂಬ ಈರ್ಷ್ಯೆಯು ಉಕ್ಕಿ ಊನಗೊಳಿಸುವ ಋತುಸ್ರಾವದಂತೆ ಎಂದೆಂದೂ ಏರಾಟದ (ಪೈಪೋಟಿಯ) ಐಬಿನೊಂದಿಗೆ (ಒಡಕಿನೊಂದಿಗೆ) ಒಟ್ಟಾರೆಯಾದ ಓರಣವನ್ನು ಔದ್ಧತ್ಯದಿಂದ (ಉದ್ಧಟತನದಿಂದ) ಅಂಗಣದಲ್ಲೆಲ್ಲಾ ಕದಡಲು ಖರೆ ಗಡುವಿಲ್ಲದೆ ಘಾತಕವಾದ ಚಾಗದ (ತೀವ್ರವಾದ) ಛಾತಿಯೊಡನೆ ಜಗ್ಗಿ ಝುಳಪಿಸಲು ಟಣಕ್ಕನೆ ಠಿಕಾಣಿಯಲ್ಲಿ ಡೋಲನ್ನು ಢಿಕ್ಕಿಸುತ್ತಾ ತಬ್ಬಿಬ್ಬುಗೊಳಿಸಿ ಥರಗುಟ್ಟಿಸುತ್ತಾ ದಣಿವಿಲ್ಲದೇ ಧ್ವಂಸಗೊಳಿಸಲು ನಯವಂಚನೆಯ ಪರಾಕ್ರಮದೊಡನೆ ಫೇರಿಯನ್ನು (ಯಕ್ಷಿಣಿಯನ್ನು) ಬಟ್ಟೆಯಿಳಿಸುವ ಭಂಡತನಕ್ಕೆ ಮುಕ್ತಾಯವನ್ನು ಯಥಾವತ್ತಾಗಿ ರಚನಾತ್ಮಕತೆಯ ಲಗಾಮಿನೊಡನೆ ವಶಪಡಿಸಿಕೊಂಡರೆ ಶರಣಾಗುವುದು ಷಕ್ಕಿಲ್ಲದೇ ಸ್ತಿಮಿತದಲ್ಲಿಲ್ಲದ ಹಯದ ಕ್ಷೋಭೆ



ಅಕ್ಕರೆಯ ಆಡಳಿತಾಧಿಕಾರಿಯೆನಿಸಿ ಇಕ್ಕಟ್ಟಿನಲ್ಲಿರುವವರುಡಿಗಳಿಗೆ ಈಗಲೂ ಉಪಕಾರಿಯೆಂಬ ಊರುಗೋಲಾಗಿ ಋಜುತನದಲ್ಲವರ ಎಣಿಕೆಗೆಟುಕದ ಏಳಿಗೆಗಾಗಿ ಐಬಿಲ್ಲದೇ ಒದಗಲೆಂಬಂತೆ, ಓಜಸ್ಸಿನೊಡನೆ ಔದಾರ್ಯಸೂಸಿ ಅಂತಃಸಾಕ್ಷಿಯ ಕಟ್ಟಪ್ಪಣೆಯಂತೆ ಖಂಡಿತವಾದಿಯಾಗಿ, ಗಡಿಯಿಂದಾಚೆಗೂ ಘನತೆಯನ್ನೆತ್ತಲು ಚಟುವಟಿಕೆಗಳನ್ನು ಛಾತಿಯಿಂದ ಜನಹಿತಕ್ಕಾಗಿ ಝುರಿಯಂತೆ, ಟೊಂಕಕಟ್ಟಿ ಠೀವಿಯಿಂದ ಡಾಲಾಗಿ ಢಾಲುಮಾಡುತ್ತಾ ತಣಿಸುವ ಥೈಲಿಯನ್ನು ದಾನಮಾಡುತ್ತಾ ಧರ್ಮಭೀರುವೆನಿಸಿ ನಳನಳಿಸುವ ಪಂಜಿನಂತೆ ಫಲಕಾರಿಯಾಗಲು, ಬಗೆಬಗೆಯ ಭದ್ರವಾದ ಮಜಲುಗಳನ್ನು ಯಥಾವತ್ತಾಗಿ ರಚನಾತ್ಮಕವಾದ ಲಕ್ಷ್ಯದೊಡನೆ ವಿವೇಚನೆಯಿಂದ ಶೋಭಾಯಮಾನವಾದ ಷರತ್ತಿನೊಂದಿಗೆ ಸರ್ವರಿಗೂ ಹಂಚುತ್ತಿರುವ ಕ್ಷಮತಾವಾದಿ!

**೧. ಪ್ರಕೃತಿ ಮಾತೆ**
ಅನವರತ ಅಸೂಯೆರಹಿತ ಅಕ್ಕರೆಯನ್ನು
ಅವಸರವಿಲ್ಲದೇ ಅಂಕುರದ ಅಭ್ಯುದಯಕ್ಕಾಗಿ
ಅನಶನದ ಅನಲವಿದ್ದರೂ ಅನುಗ್ರಹಿಸುವ
ಅವಳ ಅರ್ಪಣಾಭಾವ ಅಸಮಾನ್ಯವಾದದ್ದು!

**೨. ವಾಸ್ತವ**
ಆಗುತ್ತಿರುವುದು ಆಗೇ ಆಗುವುದು
ಆದ್ದರಿಂದ ಆಗದಿರಲೆಂದು ಆವೇಶಕ್ಕೊಳಗಾಗದೆ
ಆವೃತ ಆರ್ಪಿನ ಆಲಂಬನದಿಂದ
ಆಯತಪ್ಪದೆ ಆರಾಧಿಸಿದರೆ ಆರಾಮ

**೩. ಜೀವನ**
ಇಹದ ಇಳಿಜಾರಿಗೆ ಇಂದ್ರಿಯಗಳನ್ನು
ಇತ್ತರೆ ಇಳಿಹೊತ್ತಿನಲ್ಲಿ ಇರಿಯುವುದು
ಇಡಿಯಾಗಿ ಇತಿಶ್ರೀಗೈಯ್ಯಲು ಇರವನ್ನು,
ಇಚ್ಛಿತ್ತರಾಗದಿದ್ದರೆ ಇಮ್ಮಡಿಸುವುದು ಇರವು

**೪. ಸತ್ಯ**
ಈಶ್ವರನು ಈಕ್ಷಿಸುತ್ತಿರುವ ಈಗ್ಯೂ
ಈತನು ಈಚೆಗೆ ಈರ್ಷ್ಯೆಯಿಂದ
ಈಸುತ್ತಿರುವನು ಈಷಣತ್ರಯರಿಗಾಗಿ ಈಹಾಮೃಗದಂತೆ,
ಈಡೇರಿಸಲಾರನು ಈಕ್ಷಕನು ಈಪ್ಸೆಯನು

**೫. ವಿದ್ಯೆ**
ಉಪಾಧ್ಯಾಯರ ಉಕ್ತಿಯನ್ನು ಉತ್ತೀರ್ಣರಾಗಲು
ಉಡುಗೊರೆಯಾಗಿಸೆ ಉಪಯುಕ್ತವಾಯಿತು ಉಪದೇಶ
ಉದಾಸೀನದಿಂದ ಉದ್ಧಟತನದಿ ಉಪೇಕ್ಷಿಸಿದರೆ
ಉಲ್ಬಣಿಸುವುದು ಉಪತಾಪದ ಉಸಿರು

**೬. ಯಶಸ್ಸು**
ಊಣವಿರದ ಊರು ಊರ್ಧ್ವಲೋಕ
ಊನಮನಸ್ಸನ್ನು ಊರ್ಜಸ್ವಿತೆಯ ಊರೆಯಿಂದ
ಊರ್ಜಿತಗೊಳಿಸಿಕೊಂಡು ಊಳಿಗತನವನ್ನು ಊಡಿದರೆ
ಊಂಕಬಹುದು ಊಣದ ಊರೆಯಿಂದ

**೭. ಋಣ**

ಋಣಾನುಬಂಧವಿದ್ದರೆ, ಋತುಗಳುರುಳಿದಂತೆ ಋಣತ್ರಯಗಳಿಂದ
ಋಣಮುಕ್ತರಾಗಲು ಋಜುತ್ವದೊಡನೆ ಋಷಭನಂತೆ
ಋಜುಮಾರ್ಗದಲ್ಲಿ ಋಕ್ಕಿನ ಋದ್ಧಿಯಾದರೆ
ಋಣಭಾರದ ಋಣಮುಕ್ತಿಯ ಋಜುವಾತಾದಂತೆ.

**೮. ಯಜಮಾನ**

ಎಚ್ಚರದಿಂದಿದ್ದರೆ ಎದುರಾಳಿಯನ್ನು ಎದುರಿಸಬಹುದು
ಎಚ್ಚರವಿಲ್ಲದಿದ್ದರೆ ಎದುರಾಳಿಯು ಎದುರಿಸುವನು
ಎಚ್ಚೆತ್ತು ಎದೆಗುದಿಯಿಲ್ಲದೆ ಎವೆಯಿಕ್ಕದೆ
ಎರಕವನು ಎಸಗಿದವನೇ ಎರೆಯ

**೯. ಏಳಿಗೆ**

ಏರುಜವ್ವನದಲ್ಲಿ ಏಕತ್ರವಾಗಿ ಏವಯಿಸದೆ
ಏಕಾಂಗಿಯಾಗಿ ಏಕಾಗ್ರತೆಯಿಂದ ಏರಿಳಿತಗಳೆದುರು
ಏರಾಟದ ಏದುಸಿರಿನಿಂದ ಏಣಿಯನ್ನು ಏರಿದರೆ
ಏವಕ್ಕೊಳಗಾಗುವುದರಿಂದ ಏಮಾರದೆ ಏಳಿಗೆಯಾಗಬಹುದು

**೧೦. ಫಲಿತಾಂಶ**

ಐನೋರು ಐಹಿಕದ ಐಸಿರಿಯೆಂಬ
ಐಂದ್ರಜಾಲದ ಐರಾವತವನ್ನೇರುವ ಐಲಿನಿಂದಾಚೆಯ
ಐಕ್ಯತೆಯನ್ನು ಐಚ್ಛಿಕಗೊಳಿಸಿಕೊಂಡರೆ ಐಕಿಲ್‌ನ
ಐಂದವವೇ ಐನಾದಂತಾದದ್ದು ಐತಿಹ್ಯ!

**೧೧. ಗೆಳೆತನ**

ಒಡನಾಡಿಯಾದರೂ ಒತ್ತಾಯಕ್ಕೆ ಒಪ್ಪದೇ
ಒಳವಿನಲಿ ಒರೆಹಚ್ಚಿ ಒಳನೋಟದ
ಒಗಟನ್ನು ಒಡನೆಯೇ ಒಡೆದರೆ
ಒಸರುವುದು ಒಡತನವೆಂಬ ಒಡವೆ

**೧೨. ನಿರರ್ಗಳತೆ**

ಓರೆಗಣ್ಣಿನಿಂದ ಓಲೆಯನ್ನು ಓದಿದ
ಓಪನ ಓಪು ಓತಪ್ರೋತವಾಗಲು
ಓಹ್ ಓಕಿರದ ಓಜಸ್ಸಿನ
ಓಕುಳಿಯು ಓರೆಯಿಲ್ಲದೇ ಓಸರಣೆಯಾಗುವುದು

**೧೩. ಔತಣ**
ಔನ್ನತ್ಯವಿಲ್ಲದ ಔಪಚಾರಿಕೆಯ ಔದಾರ್ಯದ
ಔರಸ ಔತಣವೆಂದು ಔದಾಸೀನ್ಯವಿಲ್ಲದೇ
ಔತ್ಸುಕ್ಯದಿಂದ ಔರದೊಡನಾಗಮಿಸಿದವಗೆ ಔಡನ್ನು
ಔಚಿ ಔಕಿದಂತಾಯಿತು ಔದ್ಧತ್ಯವನ್ನೆದುರಿಸಿ!

**೧೪. ದಾರಿ**
ಅಂತರಂಗಕ್ಕೆ ಅಂಟಿದ ಅಂಗವೈಕಲ್ಯತೆಯನ್ನು
ಅಂಕೆಯಲ್ಲಿಟ್ಟರೆ ಅಂಧಕಾರವು ಅಂತರ್ಧಾನವಾದ
ಅಂಕಿತವು ಅಂತರ್ಯಾಮಿಯ ಅಂತರವನ್ನು
ಅಂತ್ಯಗೊಳಿಸಲು ಅಂಬುಜನಾಭನೇ ಅಂಬಿಗನಾದಾನು.

**೧೫. ವಿಪರ್ಯಾಸ**
ಕಲಾವಿದನ ಕಲಾಕೌಶಲ್ಯ ಕಂಗೊಳಿಸುತ್ತಿರಲು
ಕೇವಲ ಕುಲಹೀನನೆಂದು ಕುಹಕವಾಡಿದರೆ
ಕುಗ್ಗದ ಕುಶಲಿಯ ಕುಶಾಗ್ರತನವು
ಕುಲುಮೆಯಲ್ಲಿರುವ ಕಾಂಚನದಂತೆ ಕಾಂತಿಗೊಳ್ಳುವುದಷ್ಟೇ

**೧೬. ತೃಪ್ತಿ**
ಖ್ಯಾತ ಖಾದಿಧಾರಿಯು ಖಿನ್ನತೆಗೊಳಗಾದದ್ದು
ಖಾಸಾಜೀವನದ ಖೋಡಿತನಕ್ಕಾದ ಖೋತಾದಿಂದ.
ಖೇದವಿಲ್ಲದೇ ಖುದ್ದಾಗಿ ಖಯಾಲಿಯನ್ನು
ಖಂಡಿಸಿದರೆ ಖಾತ್ರಿ ಖುಷಿ!

**೧೭. ನಿಶ್ಚಿತ**
ಗತಿಸಿದಕ್ಕೆ ಗಹನವಾಗಿ ಗೋಳಿಡದೆ
ಗಮ್ಯಸ್ಥಾನದೆಡೆಗೆ ಗಡಿಪಾರಾಗಲು ಗುರುತರ
ಗುಣಮಟ್ಟವನ್ನು ಗಳಿಸುವತ್ತ ಗಂಭೀರವಾಗಿ
ಗಮನಿಸಿದರೆ ಗುರಿತಾಕಲು ಗೊಂದಲವಿಲ್ಲ

**೧೮. ಘನತೆ**
ಘಟಾನುಘಟಿಗಳೆಲ್ಲಾ ಘನಂದಾರಿ ಘಟನೆಗಳನ್ನು
ಘಳಿಗೆಯರಿವಿಲ್ಲದೆ ಘಟಿಸಲೆಂದು ಘಂಟಾಘೋಷವಾಗಿ
ಘೋಷಿಸಿದರೆ ಘಳಿಲನೆ ಘರ್ಷಣೆಯಿಂದ
ಘಾತಕವಾಗಿ ಘನತೆಯು ಘನೀಭವಿಸಿತು.

**೧೯. ರಸಿಕತೆ**

ಚಂದ್ರಚಕೋರನ ಚಕ್ಕಂದಕ್ಕೆ ಚಕಿತಳಾದ
ಚೆಲುವೆಯು ಚೇತರಿಕೊಂಡಂದಳು ಚಾತುರ್ಯದಿಂದ
ಚಂಚಲವಾದ ಚಿತ್ತವೃತ್ತಿಯನ್ನರಿತು ಚಪಲಗೊಳಿಸಿದೆಯೋ
ಚಪ್ಪರಿಸಬಹುದು ಚೆಲ್ಲಾಟವನ್ನು ಚ್ಯುತಿಯಿಲ್ಲದೆ

**೨೦. ಛಲವಾದಿ**

ಛೇಡಿಸಿಕೊಳ್ಳುವುದೆಂದರೆ ಛೇದಿಸಿಕೊಂಡಂತೆ, ಛೀಮಾರಿಕೆಯೋ
ಛಿದ್ರಿಸಿಕೊಂಡಂತೆ, ಛದ್ಮವೇಷಿಗಳಾಗದೇ ಛಾತಿಯಿಂದ
ಛಪಾಯಿಸದೇ ಛಾತ್ರನಾಗಿ ಛೇಕದ
ಛಾಯೆಯ ಛಾಪನ್ಮೂಡಿಸುವವನೇ ಛಲವಾದಿ

**೨೧. ಬದಲಾವಣೆ**

ಜಾಗರೂಕತೆಯಿಂದ ಜವಾಬ್ದಾರಿಯನ್ನರಿತು ಜಾಣ್ಮೆಯಲಿ
ಜರುಗಿಸುವ ಜೀವನವು ಜೊತೆಯಲ್ಲಿರುವವರನ್ನು
ಜರೂರು ಜಾಗೃತಿಗೊಳಿಸಿ ಜಂಬರ
ಜಗ್ಗಾಟದ ಜಗತ್ತನ್ನೇ ಜ್ವಲಂತವಾಗಿಸುವುದು

**೨೨. ಮೋಸಗಾರ**

ಟೋಣಪನಾದ ಟಕ್ಕನು ಟಕಾಯಿಸಲು
ಟೊಂಗೆಯಿಂದ ಟಣಕ್ಕನೆ ಟಗರಿನಂತೆಗರಿ
ಟಮಳಿಸಲು ಟೊಂಕಕಟ್ಟಿ ಟಳಾಯಿಸುತ್ತಾ
ಟಿಪ್ಪಣಿಸಿ ಟೋಕಳಿಯನ್ನು ಟೆಬ್ಬರಿಸಿದನು

**೨೩. ತೀರ್ಮಾನ**

ಠಾಣೆಯಲ್ಲಿ ಠಿಕಾಣಿಯಾಗಿದ್ದ ಠಕ್ಕನ
ಠಕ್ಕುತನವನ್ನು ಠವಣಿಸಿ ಠೀವಿಯಲಿ
ಠಾಣಾಧಿಕಾರಿಯು ಠಾವಿಕೆಯೊಡನೆ ಠೇಂಕಾರದ
ಠರಾವಿನ ಠಸ್ಸೆಯೊತ್ತಿದನು ಠೀಕಾಗಿ

**೨೪. ಪರಿಹಾರ**

ಡಂಭಾಚಾರದ ಡಕ್ಕೆಯನ್ನು ಡಾವರಿಸುವವರ
ಡೌಲನ್ನು ಡೊಕ್ಕರಿಸಿದರೆ ಡಿಳ್ಳರಾಗುವರು
ಡೊಂಕು ಡಿಂಗರರ ಡೊಕ್ಕನ್ನು
ಡಾಳಾಗಿಸಲು ಡಂಕುತನದಿಂದಲೇ ಡಬ್ಬಬೇಕು

**೧೫. ಬದುಕು**
ತಂಗಳನ್ನು ತಿನ್ನಲು ತಗಾದೆ
ತೆಗೆದ ತನಯನನ್ನು ತೆಪ್ಪಗಾಗಿಸಲು
ತಾಯಿಗಾಯಿತು ತಳಮಳ, ತೊಡಕನ್ನು
ತಣಿಸಲು ತಡಕಾಡಿದಳು ತಂತ್ರಕ್ಕಾಗಿ!

**೧೬. ದಾಂಪತ್ಯ**
ದಾಂಪತ್ಯವೆಂಬುದು ದಣಿವರಿಯದೇ ದೃಢನಂಬಿಕೆಯಿಂದ
ದೂರದೃಷ್ಟಿಯೊಡನೆ ದ್ವಂದ್ವವಿಲ್ಲದೆ ದೀಕ್ಷಿತರಾಗಿ
ದೀರ್ಘಾವಧಿಯ ದಾಕ್ಷಿಣ್ಯಪೂರ್ವಕ ದ್ಯೋತಕವನ್ನು
ದುಗುಣಗೊಳಿಸುವ ದಾರಿಯ ದೀವಿಗೆ

**೧೭. ಧರ್ಮದರ್ಶಿ**
ಧಾಂದಲೆಯಿಂದಾವೃತ್ತವಾದ ಧರೆಯಲ್ಲಿ ಧಾವಂತವಿಲ್ಲದೆ
ಧರ್ಮಾಂಧತೆಯನ್ನು ಧಮನಗೊಳಿಸಿ ಧರ್ಮಸೂಕ್ಷ್ಮಗಳನ್ನು
ಧಾರಾಕಾರವಾಗಿ ಧಾರೆಯೆರೆದು ಧರ್ಮಾಚರಣೆಯ
ಧ್ಯೇಯದೊಂದಿಗೆ ಧಾರ್ಷ್ಟ್ಯದಿಂದಿರುವ ಧೀಮಂತ

**೧೮. ಪ್ರತಿಫಲ**
ನಿರಂತರ ನೆನೆಯುತ್ತಿರಬೇಕು ನಿನಗೆ
ನೆರವು ನೀಡಿದವರ, ನೆರಳಾಗಬೇಕು
ನೀನೂ ನೋವಿನಿಂದ ನರಳುತ್ತಿರುವವರ
ನೋಡಾಗ ನಳನಳಿಸುವುದೆಲ್ಲೆಡೆ ನೆಮ್ಮದಿ

**೧೯. ವಿಪರ್ಯಾಸ**
ಪ್ರಥಮಶ್ರೇಣಿಯ ಪದವೀಧರನಾದರೂ ಪರದಾಡುತ್ತಿದ್ದ
ಪರಮೇಶಿ ಪ್ರತಿಷ್ಠಾನದ ಪ್ರವೇಶಕ್ಕಾಗಿ
ಪರಾಭವವೇಕೆಂದು ಪರಾಮರ್ಶಿಸಿದಾಗರಿತು ಪೂರ್ಣ
ಪೆಚ್ಚಾದನು ಪೂರ್ವಾನುಭವವನ್ನು ಪೂರೈಸಿಲ್ಲವೆಂದು!

**೨೦. ಅನುಭವಿ**
ಫಲಕದಲ್ಲಿನ ಫಲಿತಾಂಶವು ಫಲದಾಯಕವಾಗಿರದೆ
ಫಟಿಂಗನನ್ನು ಫಜೀತಿಗೀಡುಮಾಡಿದರೂ ಫಕ್ಕನೆ
ಫಾಲಬರಹದ ಫಸಲಿನ ಫಲವೆಂದರಿತು
ಫಣಾಮಣಿಯಂತೆ ಫುಲ್ಲನಾದ ಫಲಾನುಭವಿ!

**೩೧. ಕಷ್ಟ-ಸುಖ**

ಬೀದಿ ಬದಿಯಲ್ಲಿ ಬಜ್ಜಿಯನ್ನು
ಬಿಕರಿಸುತ್ತಿದ್ದ ಬಸವನ ಬವಣೆ
ಬದಲಾಯಿತು ಬಲು ಬೇಗ
ಬಡಾವಣೆಯ ಬೃಹತ್ ಬೆಳವಣಿಗೆಯಿಂದ!

**೩೨. ಭ್ರಮೆ**

ಭಾವರಹಿತವಾಗಿ ಭೌತಿಕದಲ್ಲಿ ಭಂಡಾಟವಾಡುತ್ತ
ಭ್ರಾಂತಿಯ ಭಾಗವಾಗಿ ಭೋಗಕ್ಕೊಳಗಾದರೆ
ಭವ್ಯ ಭವಿಷ್ಯದಲ್ಲಿ ಭಾವಪೂರ್ಣ
ಭಾಗ್ಯದ ಭ್ರಮಣವೆಂಬುದು ಭ್ರಮೆಯಷ್ಟೇ

**೩೩. ಮುಕ್ತಿ**

ಮನೆ ಮಠ ಮಡದಿಯೆಂಬ
ಮೋಹದ ಮುಸುಕು ಮಾಸಿದರೇನೇ
ಮಾನವನು ಮಾನಸಿಕವಾಗಿ ಮ್ಲಾನನಾಗದೆ
ಮುಕ್ತಿ ಮಾರ್ಗದ ಮಜಲನ್ನೇರುವನು

**೩೪. ಅವರವ ಭಾವಕ್ಕೆ**

ಯೌವ್ವನಿಗರಿಗೆ ಯಾಮಿನಿಯು ಯಾತನೆ
ಯುವಜನರಿಗೆ ಯುಗ್ಮದ ಯೋಜನೆ
ಯಜಮಾನರಿಗೆ ಯಶಸ್ಸಿನ ಯೋಚನೆ
ಯಾಜಕರಿಗೆ ಯಾತ್ರೆಯ ಯಾಚನೆ

**೩೫. ನಿರಾಸೆ**

ರೂಢಿಯಂತೆ ರುದ್ರನ ರೇಖಾಚಿತ್ರವನ್ನು
ರಸ್ತೆಯಲ್ಲರಳಿಸಿ ರಸಿಕರಿಂದ ರವಾನೆಯಾಗುವ
ರೂಪಾಯಿಯಿಂದ ರಂಗೇರಲಿದ್ದವಗೆ ರಾತ್ರಿಯಾದರೂ
ರಿಕ್ತವಾಗಿದ್ದ ರುಮಾಲಿನಿಂದ ರಸಾಭಾಸವಾಯಿತು

**೩೬. ಬದಲಾವಣೆ**

ಲಂಪಟನು ಲಜ್ಜೆಗೆಟ್ಟ ಲಲನೆಯನ್ನು
ಲಾಲಿಸುತ್ತಿದ್ದರೆ ಲೋಕೋಕ್ತಿಯಂತೆ ಲೋಲುಪನೆಂದು
ಲೇವಡಿಗೈಯ್ಯದೇ ಲತ್ತೆಯಿತ್ತು ಲಾಡಿಯ
ಲಗಾಮಿನೆಡೆಗೆ ಲಕ್ಷ್ಯ ವಿಡಲೆಚ್ಚರಿಸುವುದು ಲೇಸು

**೩೭. ಫಲಿತಾಂಶ**

ವಿದ್ಯಾರ್ಥಿಯು ವಿನೀತನಾಗಿ ವ್ಯಾಸಂಗಕ್ಕೆ
ವೇಳೆಯನ್ನು ವಿನಿಯೋಗಿಸಿದ ವರ್ತಮಾನದ
ವರ್ತನೆಯು ವಾರ್ಧಕ್ಯದ ವೈಫಲ್ಯರಹಿತವಾದ
ವಾಸದಲ್ಲಿ ವ್ಯಸನರಹಿತನನ್ನಾಗಿಸುವುದು ವಾಸ್ತವ

**೩೮. ಹಾರೈಕೆ**

ಶಾಂತಚಿತ್ತಳಾದ ಶೃಂಗೇರಿಯ ಶಾರದೆಗೆ
ಶುದ್ಧಮನಸ್ಸಿನಿಂದ ಶಕ್ತ್ಯಾನುಸಾರ ಶಿರಬಾಗಿ
ಶರಣಾಗತಿಯನ್ನು ಶೃತಪಡಿಸಿದರೆ ಶ್ರೇಯಸ್ಸಿನಿಂದ
ಶುಭದ ಶೃಂಗಕ್ಕೇರಲು ಶಂಕೆಯಿಲ್ಲ

**೩೯. ಅಭಯ**

ಷಡ್ಯಂತ್ರವಿಲ್ಲದೇ ಷಡಂಗವನ್ನರಿತು ಷಡ್ರಸಗಳನ್ನಾಸ್ವಾದಿಸುತ್ತಾ
ಷಡ್ಗುಣಗಳೊಂದಿಗೆ ಷೋಡಶ, ಷೋಡಶದಾನ
ಷಟ್ಕರ್ಮಗಳನ್ನಾಚರಿಸುತ್ತಾ ಷಡಕ್ಷರಿಗೆ ಷೋಡಶೋಪಚಾರವನ್ನರ್ಪಿಸಿದರೆ
ಷಟ್ಸ್ಥಲವೇರಿ ಷಡ್ದರ್ಶನವಾಗುವುದರಲ್ಲಿ ಷಕ್ಕಿಲ್ಲ.

**೪೦. ಕಾರಣ**

ಸಂಗಾತಿಯು ಸಂಕೋಚದಿಂದ ಸಂಜ್ಞೆಯನ್ನು
ಸೂಚಿಸಿದ ಸಕಾರಣವನ್ನು ಸೋಸಲು
ಸುಲಭದಲಿ ಸಿಗಲೊಲ್ಲದು ಸುಳಿವೇಕೆಂದರೆ
ಸ್ತ್ರೀಯ ಸ್ವಭಾವವು ಸಂಕೀರ್ಣ

**೪೧. ಪ್ರಶ್ನೆ**

ಹಕ್ಕಿಗೆ ಹಾಡಿಯ ಹಂಗೆಲ್ಲಿದೆ?
ಹತಾಶ ಹೃದಯದಲಿ ಹುರುಪೆಲ್ಲಿದೆ?
ಹಗೆತನ ಹತ್ತುರಿಯುತ್ತಿರೆ ಹತೋಟಿಯೆಲ್ಲಿದೆ?
ಹಾಗೆಯೆ ಹಣೆಬರಹಕ್ಕೆ ಹೊಣೆಯಿದೆಯೆ?